# ಕೊಡಗು ಸಂಗಾತಿ

ಪಾಕ್ಷಿಕ ಪತ್ರಿಕೆ

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K.R. N. N. 240 ಸಂಪುಟ : 3 ಸಂಚಿಕೆ : 12 ಜೂನ್15 ರಿಂದ 30, 1999. ಪುಟಗಳು : 24 ಬೆಲೆ ರೂ. : 5-00



[ಲೇಖನ ಒಳಪುಟಗಳಲ್ಲಿ]

## 1960ರ ದಶಕದಲ್ಲಿ ಮೈಸೂರಿನಲ್ಲಿ ಕೊಡಗು ಗೌಡರ ಸಂಘಟನೆಗೆ ಕಾರಣ ಕರ್ತರಾಗಿ ನಂತರ ಅಧ್ಯಕ್ಷರಾದ ಶ್ರೀ ಬೈಲೋಳಿರ ಕಾರ್ಯಪ್ಪನವರು



## ಜೀವಾವಧಿ ಸದಸ್ಯತನ ಕೊಟ್ಟೋರು

ಶ್ರೀ ಊರುಬೈಲು ಜಯಪ್ರಕಾಶ್, ಕೊಡಗು ಜಿಲ್ಲಾ ಪಂಚಾಯತಿ ಅಧ್ಯಕ್ಷರು, ಇವು ಪತ್ರಿಕೆಯ ಅಭಿವೃದ್ಧಿ ದೃಷ್ಟಿಯಿಂದ ಜೀವಾವಧಿ ಸದಸ್ಯತನ ಕೊಟ್ಟ್ ಸಹಕರಿಸೊಳೋ. ಇವುಕೆ ಕುಲಗುರು ವೆಂಕಟರಮಣನ ಕೃಪಾಕಟಾಕ್ಷ ಇರಲಿತ್ತೇಳಿ ಸಂಗಾತಿ ಹಾರೈಸಿದೆ.

— ಸಂಪಾದಕಿ



ಕೊಡಗು ಬಂಡಾಯದ ವೀರ ಯೋಧ "ಗುಡ್ಡೆಮನೆ ಅಪ್ಪಯ್ಯ ಗೌಡ ಸ್ಮಾರಕ ಜಿಲ್ಲಾ ಮಟ್ಟದ ಕಾಲ್ಚೆಂಡು" ಪಂದ್ಯಾವಳಿಯ ಅಂತಿಮ ದಿನ ಮಡಿಕೇರಿಯ ಅಭಿಲಾಷ್ ತಂಡಕ್ಕೆ ಕೊಡಗು ಜಿಲ್ಲಾ ಪಂಚಾಯಿತ್ ಅಧ್ಯಕ್ಷ ಶ್ರೀ ಊರುಬೈಲ್ ಜಯಪ್ರಕಾಶ್‌ರಿಂದ ಪ್ರತಿಷ್ಠಿತ ವಿಜಯದ ಚಿಹ್ನೆ ನೀಡುತ್ತಿರುವುದು

ಚಿತ್ರದಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲ ಕೊಕ್ಕಲೇರ ರೇಖಾ ಕಾಳಯ್ಯನವರು, ಜನಾಂಗದ ಯುವ ಮುಂದಾಳು, ಗೌಡ ಸಾಂಸ್ಕೃತಿಕ ಅಕಾಡೆಮಿ ಕಾರ್ಯದರ್ಶಿ ಕೋಡಿ ಚಂದ್ರಶೇಖರ್‌ನವರು ಮತ್ತು ಗೌಡ ವಿದ್ಯಾ ಸಂಘದ ಅಧ್ಯಕ್ಷ ಕೆ. ಕೆ. ಪೂರ್ಣಯ್ಯನವರನ್ನು ಸಹ ಕಾಣಬಹುದು.

## ಪ್ರಕಟಣೆ

**ಕೊಡಗು ಗೌಡ ವಿದ್ಯಾರ್ಥಿ ವಸತಿ ನಿಲಯಕ್ಕೆ ಪ್ರವೇಶಾವಕಾಶ**

ಕೊಡಗು ಗೌಡ ವಿದ್ಯಾ ಸಂಘ ಶಾಖೆ, ಜಯಲಕ್ಷ್ಮಿಪುರಂ, ಮೈಸೂರು

ಈ ಮೇಲ್ಕಂಡ ವಸತಿ ನಿಲಯಕ್ಕೆ 1999-2000ರ ಸಾಲಿಗೆ ಪ್ರವೇಶ ಬಯಸುವ ಕೊಡಗು ಗೌಡ ಜನಾಂಗದ ಪುರುಷ ವಿದ್ಯಾರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. ಸೇರ ಬಯಸುವ ವಿದ್ಯಾರ್ಥಿಗಳು ಇದೇ ಜೂನ್ ತಿಂಗಳ 25ರ ಒಳಗಾಗಿ ಅರ್ಜಿ ಸಲ್ಲಿಸುವಂತೆ ಕೋರಲಾಗಿದೆ.

**ಶ್ರೀ ಕೆ. ಕೆ. ಪೂರ್ಣಯ್ಯ**
ಅಧ್ಯಕ್ಷರು, ಕೊ. ಗೌ. ವಿ. ಸಂಘ,
ಮಡಿಕೇರಿ ಇವರ ಅಪ್ಪಣೆ ಮೇರೆಗೆ

ಶ್ರೀ ಪೊರೆಯನ ಆನಂದ
ವ್ಯವಸ್ಥಾಪಕರು
ಕೊ. ಗೌ. ವಿ. ನಿಲಯ ಮೈಸೂರು.

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :

ಪಟ್ಟಡ ಪಿ. ಶೀಲಾಮಣಿ

ಗೌರವ ಸಂಪಾದಕ :

ಪಟ್ಟಡ ಎಂ. ಪ್ರಭಾಕರ

ಚಂದಾ ಕಳುಹಿಸುವ ಮತ್ತು

ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**

ನಂ. 35, "ಸವಿತಾ ನಿಲಯ"

1ನೇ ಕ್ರಾಸ್, 4ನೇ ಬ್ಲಾಕ್,

ಜಯಲಕ್ಷ್ಮಿಪುರಂ, ಮೈಸೂರು - 570 012.

ಫೋನ್ : **0821/516771**

**ಸಂಪರ್ಕಿಸುವ ವಿಳಾಸ**

ಬೈತಡ್ಕ ಜಾನಕಿ ಬೆಳ್ಯಪ್ಪ

ನಂ. 21-16 ಎಲ್. ಐ. ಸಿ. ಹತ್ತಿರ

ರೇಸ್ ಕೋರ್ಸ್ ರಸ್ತೆ, ಮಡಿಕೇರಿ

ದೂರವಾಣಿ : 08272/28047

ಮಣಿ ನಂಗಾರ್

ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,

ಚಿಕ್ಕಪೇಟೆ, ಮಡಿಕೇರಿ - 571 201

ದೂರವಾಣಿ : 08272/29372

ಕುಂಭಗೌಡನ ಸೋಮಣ್ಣ

ಮಯೂರ ಕೋಲ್ಡ್ ಸ್ಟೋರೇಜ್

ಮುಖ್ಯ ರಸ್ತೆ, ಕುಶಾಲನಗರ - 571 234

ಅಮ್ಮಾಜೀರ ಪೊನ್ನಪ್ಪ /

ಕಲ್ಲುಮುಟ್ಲು ಬಸಪ್ಪ

20, 1ನೇ ಮೈನ್, 4ನೇ ಕ್ರಾಸ್

ಸಾಕಮ್ಮ ಗಾರ್ಡನ್, ಬಸವನಗುಡಿ,

ಬೆಂಗಳೂರು - 04

ದೂರವಾಣಿ - 080/6549669






**ಅರೆಭಾಷಿಕ ವಿಭಾಗ**



## ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | - | **5 ರೂ.** |
| ಅರ್ಧ ವಾರ್ಷಿಕ | - | **60 ರೂ.** |
| ವಾರ್ಷಿಕ ಚಂದಾ | - | **120 ರೂ.** |

# ಸಂಪಾದಕೀಯ : ನಾಟಿ ವೈದ್ಯ - ಗಿಡಮೂಲಿಕೆಗಳು

ಭಾರತೀಯ ಸಂಸ್ಕೃತಿಯಲ್ಲಿ ಆಯುರ್ವೇದ ಎಲ್ಲಾ ಜನತೆಯ ಜೀವನದ ಅವಿಭಾಜ್ಯ ಅಂಗವಾಗಿ ಬೆಳೆದಿತ್ತು. ಹಳ್ಳಿಯ ಮೂಲೆ ಮೂಲೆಗಳಲ್ಲೂ ಗಿಡ ಮೂಲಿಕೆಗಳ ಉಪಯೋಗದಿಂದ ಸಾಮಾನ್ಯ ಜನರ ಖಾಯಿಲೆಗಳು ನುರಿತ ವೈದ್ಯರ ಸಹಾಯವಿಲ್ಲದೆಯೇ ವಾಸಿಮಾಡಿಕೊಳ್ಳುವ ಪರಿಸ್ಥಿತಿ ಇತ್ತು. ಅಲೋಪತಿ ವೈದ್ಯ ವಿಧಾನದಲ್ಲಿ ಗುಣಮುಖವಾಗದೇ ಇದ್ದ ರೋಗಗಳನ್ನು ನಾಟಿ ಔಷಧಿಯಿಂದ ಗುಣಪಡಿಸಿಕೊಳ್ಳುವ ಸಾಮರ್ಥ್ಯ ನಮ್ಮ ಜನ ಸಾಮಾನ್ಯರಲ್ಲಿ ಈಗಲೂ ಇದೆ. ಉದಾಹರಣೆಗೆ ಕಾಮಾಲೆ ರೋಗಕ್ಕೆ ನಾಟಿ ಔಷಧಿಯೇ ದಿವ್ಯೌಷಧಿ ಎಂಬ ಭಾವನೆ ಹೆಚ್ಚಿನ ಜನರಲ್ಲಿ ಈಗಲೂ ಇರುವುದು ಸತ್ಯವಾದ ಸಂಗತಿ. ಅದೇ ರೀತಿ ಅಜೀರ್ಣದಿಂದ ಭೇದಿ ಆದರೆ ಅಳಿಕೆ ಸೊಪ್ಪಿನ ರಸದಿಂದ ತಯಾರಿಸಿದ ಕಷಾಯ ದಿವ್ಯ ಔಷಧ. ಮಲೇರಿಯಾ ಜ್ವರಕ್ಕೆ ಕಾಡಿನಲ್ಲಿ ಸಿಗುವ ಗಜುಗದ ಚಿಗುರಿನಿಂದ ತಯಾರಿಸಿದ ಕಷಾಯ ಮಲೇರಿಯಾ ಜ್ವರಕ್ಕೆ ಅಲೋಪತಿಕ್ ಇಂಜಕ್ಷನ್ಸ್ ಮತ್ತು ಮಾತ್ರೆಗಳಿಗಿಂತ ಹೆಚ್ಚಾಗಿ ಗುಣ ಪಡಿಸುವ ಔಷಧಿಯಾಗಿದೆ. ಫ್ಲೂ ಜ್ವರಕ್ಕೂ ಇದೊಂದು ಅತ್ಯುತ್ತಮ ಔಷಧಿಯಾಗಿದೆ.

ಚಂದನದ ಲೇಪನ ಚರ್ಮದ ರೋಗಗಳನ್ನು ಹೋಗಲಾಡಿಸು ಔಷಧಿಯಾಗಿದೆ. ಕೊಡಗಿನಲ್ಲಿ ಈಗ ಕಾಡೆಲ್ಲಾ ಹೋ ಕಾಫಿತೋಟಗಳಾಗಿರುವುದರಿಂದ ಈ ಗಿಡ ಮೂಲಿಕೆಗಳನ್ನು ಕಡಿ ಹಾಕಿರುವುದರಿಂದ ಇಂತಹ ಗಿಡ ಮೂಲಿಕೆಗಳು ಹಾಳಾಗಿವೆ. ಅದ ಅಲ್ಲದೆ ಈ ಔಷಧಿಗಳನ್ನು ತಿಳಿದ ವ್ಯಕ್ತಿಗಳು ಯಾವುದೋ ಮೂಢನಂಬಿಕೆಯಿಂದ ಇನ್ನೊಬ್ಬರಿಗೆ ಹೇಳದೇ ಹೋಗಿ ಅವ ಮರಣಾನಂತರ ಔಷಧಿಯ ಬಳಕೆಯೇ ಗೊತ್ತಿಲ್ಲದಂತಾಗಿದೆ. ಇಂತ ಪರಿಸ್ಥಿತಿಯನ್ನು ಪ್ರಜ್ಞಾವಂತ ಜನರು ಕಾಡಿನಲ್ಲಿ ಸಿಗುತ್ತಿರುವ ಇಂತ ಗಿಡಮೂಲಿಕೆಗಳನ್ನು ಕಾಪಾಡುವ ವ್ಯವಸ್ಥೆ ಹಾಗೂ ಅವುಗ ಉಪಯೋಗದ ವಿಷಯದಲ್ಲಿ ಹೆಚ್ಚಿನ ಜನರಿಗೆ ಪರಿಜ್ಞಾನ ಬರುವಂ ಸಮಾಜ ಎಚ್ಚೆತ್ತು ಅದಕ್ಕೆ ಬೇಕಾದ ಏರ್ಪಾಡುಗಳನ್ನು ಮಾಡಬೇ ಈ ರೀತಿ ಮಾಡದಿದ್ದರೆ ನಮ್ಮ ಸಂಸ್ಕೃತಿ ಹೇಗೆ ದಿನದಿಂದ ದಿನ ಅಧಃಪತನದ ಹಾದಿ ಹಿಡಿದಿದೆಯೋ ಅದೇ ರೀತಿ ನಮ್ಮ ನಾ ಔಷಧಿಗಳ ಪರಿಸ್ಥಿತಿಯಾದೀತೆಂದು ಸಂಗಾತಿಯ ಅನಿಸಿಕೆ.

---

## ಕೊಡಗು

ನನ್ನ ಪುಟ್ಟ ಜಿಲ್ಲೆ ಕೊಡಗು,
ಬಣ್ಣಿಸಲಾಗದಿದರ ಬೆಡಗು !
ಈ ಸುಂದರ ಪರಿಸರ,
ಪ್ರಸಿದ್ಧಿ, ದಕ್ಷಿಣ ಕಾಶ್ಮೀರ
ಈ ಸುತ್ತಲ ಪಚ್ಚೆ ಹಸಿರು,
ಜೀವಕೋಟಿಯ ಪ್ರಾಣದುಸಿರು
ಸುತ್ತಮುತ್ತಲ ಹಕ್ಕಿಯ ಕಲರವ
ತಣಿಸುವುದೆಲ್ಲರ ಬೇಗುದಿ ಮನವ
ತುಂಬಿದೆ ಇಲ್ಲಿ ಪ್ರಾಣಿ ಸಂಕುಲ
ಇದು ಪ್ರಕೃತಿ ಪ್ರೇಮಿಯ ಗುರುಕುಲ
ಕೊಡಗು ಖ್ಯಾತಿ ವೀರ-ಶೂರರಿಗೆ,
ಸುಂದರ ತರುಣ-ತರುಣಿಯರಿಗೆ;
ನಮ್ಮೀ...... ನಾಡು ಸುಂದರ
ಇದುವೆ ದೇವ ಮಂದಿರ
ಜೀವ ನದಿ ಕಾವೇರಿ,
ಖ್ಯಾತಿ ವಿವಾದ ಕಾವು ಏರಿ !
ಕೊಡಗಾಗದಿರಲಿ ಪ್ರತ್ಯೇಕ ರಾಜ್ಯ,
ನಮ್ಮನಮ್ಮೊಳಗೆ ಸಲ್ಲದ ವ್ಯಾಜ್ಯ
ನಮ್ಮ ನಮ್ಮಲ್ಲಿ ಮೊಳೆತಲ್ಲಿ ಪ್ರೀತಿ,
ನಶಿಸುವುದೆಲ್ಲರ ಮನದ ಭ್ರಾಂತಿ
ದೊರೆಯುವುದಾಗ ಮನಶಾಂತಿಃ
ಪ್ರಜ್ವಲಿಸುವುದು ನಾಡಿನ ಕಾಂತಿ
ಎತ್ತ ನೋಡಿದರತ್ತ ಅರಣ್ಯಹನನ
ಕುರುಡಾಗಿಹುದಿಲ್ಲಿ ನಮ್ಮಯ ನಯನ
ಬೆಳೆಯುತ್ತಿದೆ ಪಟ್ಟಭದ್ರ ಹಿತಾಸಕ್ತಿ
ಇವರಿಂದಿದೆಯೆ? ಕೊಡಗಿಗೆ ಮುಕ್ತಿ?
ಕೊಡಗೇರಬೇಕು ಮೇರು ಶಿಖರದಾಚೆ,
ಇದುವೆ ನನ್ನಯ ಮನದ ವಾಂಛೆ !

**ಮೂಡಗದ್ದೆ ಕೃಪಾ ಈರಪ್ಪ**
ತಿತಮತಿ

### ಸಮಾಜ ಸೇವೆಗಾಗಿ ಯುವಕರಿಗೆ ಆಹ್ವಾನ

ಶಿಕ್ಷಣ, ಯೋಗ, ಸಂಸ್ಕೃತ ಸಂಭಾಷಣೆ, ಗ್ರಾಮವಿಕಾಸ, ಆರೋಗ್ಯಸೇವೆ, ಅಸ್ಪೃಶ್ಯತಾ ನಿವಾರಣೆ, ಗುರುಕುಲ ಶಿಕ್ಷಣ, ವನವಾಸಿ ಕಲ್ಯಾಣ ಪರಿಸರ ಜಾಗೃತಿ ಮುಂತಾದ ಮಾರ್ಗದಲ್ಲಿ ಸಮಾಜ ಸೇವೆಗೆ ತೊಡಗಿಸಿಕೊಳ್ಳಲು ಹಿಂದೂ ಸೇವಾ ಪ್ರತಿಷ್ಠಾನವು ವಿದ್ಯಾವಂತ ಯುವಕರನ್ನು ಆಹ್ವಾನಿಸಿದೆ.

ಆಸಕ್ತರು ಹೆಚ್ಚಿನ ಮಾಹಿತಿಗಾಗಿ 'ಅಜಿತಶ್ರೀ', 8/28 ಬಸವನಗುಡಿ ರಸ್ತೆ, ಬೆಂಗಳೂರು - 4 ಇಲ್ಲಿ ಸಂಪರ್ಕಿಸುವಂತೆ ಪ್ರಕಟಣೆಯೊಂದರಲ್ಲಿ ಕೋರಲಾಗಿದೆ

### ಕೊಡಗು ಗೌಡ ಜನಾಂಗದ ವಿದ್ಯಾರ್ಥಿಗಳಿಗೊಂದು ಸುವಾರ್ತೆ

1998-99ನೇ ಸಾಲಿನ ಎಸ್.ಎಸ್.ಎಲ್. ಮತ್ತು ಪಿ.ಯು.ಸಿ. ದ್ವಿತೀಯ ವರ್ಷದ ಶೇಕಡ 60ಕ್ಕಿಂತಲೂ ಹೆಚ್ಚು ಅಂಕ ಪಡೆ ಗೌಡ ಜನಾಂಗದ ವಿದ್ಯಾರ್ಥಿಗಳು ತಮ ಅಂಕಪಟ್ಟಿಯೊಡನೆ ತಮ್ಮ ಹೆಸರು, ತಂ ಹೆಸರು, ಮನೆ ಹೆಸರು, ವಿಳಾಸವನ್ನು ಸಂಗಾತಿ ತಿಳಿಸಿದರೆ "ಕೊಡಗು ಸಂಗಾತಿ" ಪತ್ರಿಕೆಯ ಮಕ್ಕಳಿಗೆ ಉತ್ತೇಜನ ಪೂರಕವಾ ಪ್ರಕಟಿಸಲಾಗುವುದು. ವಿದ್ಯಾರ್ಥಿಗಳ ಪೋಷಕರು ಸಹಕರಿಸುವಂತೆ ಕೋರಿಕೆ.

– ಸಂಪಾ

### ನಿಧನ

ಮಡಿಕೇರಿ ತಾಲ್ಲೂಕು ಹೆರವನಾ ಗ್ರಾಮದ ಅರಂಬೂರು ಕಾಳಪ್ಪನವ ಅನಾರೋಗ್ಯದಿಂದ ಬಳಲುತ್ತಿದ್ದು ಹೆಚ್ಚಿ ಚಿಕಿತ್ಸೆಗಾಗಿ ಮಂಗಳೂರು ಆಸ್ಪತ್ರೆಗೆ ಒಯ್ದ ಪ್ರಯೋಜನವಾಗದೆ ದಿನಾಂಕ 2-6-99ರಂ ಕೊನೆಯುಸಿರೆಳೆದರು. ಇವರಿಗೆ 70 ವರ್ಷ ಪ್ರಾಯವಾಗಿತ್ತು. ಇವರು ಮಡಿಕೇರಿ ತಾಲ್ಲೂ ಅಭಿವೃದ್ಧಿ ಮಂಡಳಿಯ ಉಪಾಧ್ಯಕ್ಷರಾ ಸೇವೆ ಸಲ್ಲಿಸಿರುತ್ತಾರೆ.

– ಪಟ್ಟಡ ಪ್ರಭಾಕ

# ಹತ್ತು ಕುಟುಂಬ ಹದಿನೆಂಟು ಗೋತ್ರ

ಕೊಡಗು ಮತ್ತು ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಹೆಚ್ಚಿನ ಗೌಡ ಕುಟುಂಬಗಳ ಹೆಸರು ಒಂದೇ ಆಗಿದ್ದು ಮದುವೆಗಳಲ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರವನ್ನು ಹೇಳಿಯೇ ಕಾರ್ಯವನ್ನು ಪ್ರಾರಂಭಿಸುವುದು ಎಷ್ಟೋ ಶತಮಾನಗಳಿಂದ ರೂಢಿಯಾಗಿ ಬಂದಿದೆ. ಇದಕ್ಕೆ ಕಾರಣ ಆದಿ ಮೂಲದಲ್ಲಿ ನಮ್ಮ ಗೌಡರು ಹತ್ತು ಕುಟುಂಬದವರಾಗಿದ್ದರು. ಅವುಗಳು ಬೆಳೆದಂತೆ ಕುಟುಂಬದ ಸದಸ್ಯರು ಒಂದೇ ಕಡೆ ಇಲ್ಲದೆ ಬೇರೆ ಬೇರೆ ಸ್ಥಳಗಳಿಗೆ ವಲಸೆ ಹೋಗುತ್ತಾ ಈಗ ನೆಲೆ ನಿಂತಲ್ಲಿಗೆ ಬಂದು ಎಷ್ಟೋ ಶತಮಾನಗಳು ದಾಟಿರಬೇಕು ಎಂಬುದಕ್ಕೆ ಸಂಶಯವಿಲ್ಲ. ಒಂದೇ ಸ್ವಗೋತ್ರ ರಕ್ತ ಸಂಬಂಧದೊಳಗೆ ಮದುವೆ ಕಾರ್ಯ ನಿಷಿದ್ಧ. ಹೀಗೆ ರಕ್ತ ಸಂಬಂಧವನ್ನು ಗುರುತಿಸುವ ಸಲುವಾಗಿ ಈ 'ಗೋತ್ರ' ಅಂದರೆ 'ಬಳಿ' ಪದ್ಧತಿಯನ್ನು ಅನುಸರಿಸುತ್ತಾ ಬಂದಿದ್ದಾರೆ. ಹೆಚ್ಚಿನ ಜನಾಂಗಕ್ಕೆ ಅದರದ್ದೇ ಸ್ವಂತ ಹೆಸರಿರುವ ಗೋತ್ರಗಳಿರುತ್ತವೆ. ಹವ್ಯಕ ಬ್ರಾಹ್ಮಣ ಜನಾಂಗದವರಲ್ಲಿ ಋಷಿ ಮುನಿಗಳ ಹೆಸರಿನ 7 ಗೋತ್ರಗಳು ಪ್ರಮುಖವಾಗಿ ರೂಢಿಯಲ್ಲಿವೆ. ಗೋತ್ರಗಳ ಪದ್ಧತಿಯ ಅಡಿಯಲ್ಲಿ ಗೌಡರ ಮನಸ್ಸಿನಲ್ಲಿ ಒಂದೊಂದು ಗೋತ್ರಕ್ಕೆ ತಕ್ಕುದಾದ ಪ್ರತಿಷ್ಠಿತ ನಂಬಿಕೆ ಉಳಿದುಕೊಂಡು ಬಂದಿದೆ. ಆದರೆ ಈ ಪ್ರತಿಷ್ಠಿತ ಅಪ್ರತಿಷ್ಠಿತ ನಂಬಿಕೆಗಳಿಗೆ ಮೂಲ ಆಧಾರಗಳಿಲ್ಲ. ಗೋತ್ರಗಳಿಗೂ ಚರಿತ್ರಾಧಾರಗಳೂ ಇಲ್ಲ. ಉದಾ : 'ನಂದರ ಗೋತ್ರದವರು ತಾವು ನಂದವಂಶದವರು ಬಹಳ ಪ್ರಾಚೀನ ಕಾಲದವರೆಂದು ಹೆಮ್ಮೆ ಪಟ್ಟುಕೊಳ್ಳುತ್ತಾರೆ. ಆಯಾ ಗೋತ್ರಕ್ಕೆ ಸ್ವಂತಿಕೆ ಮತ್ತು ರಕ್ತದ ಗುಣಗಳಿಗೆ ತಕ್ಕುದಾದ ಮೇಲೆ ಹೇಳಿದ ಪ್ರತಿಷ್ಠಿತ ಅಪ್ರತಿಷ್ಠಿತ ನಂಬಿಕೆಗಳು ಮೂಲಾಧಾರವಾಗಿ ಕಾಣುತ್ತವೆ. ಹೇಗೆ ಗೋತ್ರ ಪದ್ಧತಿಯ ಹೆಸರಿನಲ್ಲಿ ಜನಾಂಗದೊಳಗೆನೇ ದೈವಭಕ್ತ, ಜಾಣರು, ನಿಸ್ಸೀಮರು ಎಂಬ ನುಡಿಗಟ್ಟುಗಳ ನಂಬಿಕೆಗಳು ಮನೆಮಾಡಿವೆ. ನಂದರ - ನಂದಾದೀಪ, ಬಂಗಾರನ ಬಾಳಿಕೆ, ಹೆಮ್ಮನ ಹೇಳಿಕೆ, ಮೂಲರನ - ಮೂಲಸ್ಥಾನ ಹೀಗೆ ಈ ನಾಲ್ಕು ಪ್ರಮುಖ ಗೋತ್ರಗಳು ಆಯಾಯ ವೈಶಿಷ್ಟ್ಯವನ್ನು ಸೂಚಿಸುತ್ತವೆ. 1. ನಂದರ, 2. ಹೆಮ್ಮನ, 3. ಸೆಟ್ಟಿ, 4. ಕಬರ್, 5. ಚಾಲ್ಯರ, 6. ಮೂಲರ, 7. ಬಂಗಾರ, 8. ಗೌಡ, 9. ಗೋಳಿ, 10. ಬಳಸನ್ನ, 11. ನಾಯರ್, 12. ಚಿತ್ತರ್, 13. ಗುಂಡರ, 14. ಸಾಲೆ, 15. ಕರಂಬೆರ್, 16. ಕರ್ಬನ್ನ, 17. ಔದನ್ನ, 18. ಲಿಂಗಾಯಿತ

ಈ ಮೇಲಿನ ✔ ಸೂಚಿಸಿರುವ ಗೋತ್ರಗಳು ಮಾತ್ರ ಪ್ರಚಲಿತ ಗೋತ್ರಗಳಾಗಿದ್ದು ಬಾಕಿ ಗೋತ್ರಗಳೊಳಗೆ ಸೂಕ್ಷ್ಮ ವ್ಯತ್ಯಾಸಗಳಿದ್ದು 18 ಗೋತ್ರಗಳೆಂದು ವಾಡಿಕೆ ಪಡೆದಿವೆ. ಪ್ರತಿಯೊಂದು ಗೋತ್ರಕ್ಕೂ ಒಂದೊಂದು ಅರ್ಥ ಮತ್ತು ನಂಬಿಕೆ ಇಟ್ಟುಕೊಳ್ಳಲಾಗಿದೆ.

ಹಿಂದೂ ಧರ್ಮದಲ್ಲಿ ಬರುವ ವರ್ಣಭೇಧ, ವರ್ಣವ್ಯವಸ್ಥೆ ಕ್ರಮೇಣ ಜಾತಿ ಪದ್ಧತಿಗಳಿಗೆ ಎಡೆಮಾಡಿಕೊಟ್ಟು, ಕೃಷಿಪ್ರಧಾನ ಬದುಕಿನಲ್ಲಿ ಮಣ್ಣಿನ ಮಕ್ಕಳು, ಮಣ್ಣಿನ ಒಡೆಯ ಮುಖಂಡನಾಗಿ ಬರಬರುತ್ತಾ, ಒಕ್ಕಲಿಗ ಮುಖಂಡ, ಗ್ರಾಮ ಮುಖಂಡ, ಗಾಮುಂಡ, ಗಾವುಂಡ, ಹೀಗೆ ಗೌಡನಾಗಿ ಇಡೀ ಭಾರತ ದೇಶದ ಬಂಗಾಳ ದೇಶದಿಂದ ದಕ್ಷಿಣಭಾರತದ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ವ್ಯಾಪಕವಾಗಿ ಸಮೃದ್ಧ ಬಾಳ್ವೆಯಿಂದ ನಾಡಿನ ಕಣ್ಣಾದ ಗೌಡ ಜನಾಂಗದವರಲ್ಲಿ ಅರೆಭಾಷೆಯನ್ನಾಡುವ ಕನ್ನಡ ಮತ್ತು ಕೊಡಗು ಜಿಲ್ಲೆಯ ಗೌಡರು ಬಹು ಜನಾಂಗೀಯ ಸಮಾಜದಲ್ಲಿ ತನ್ನ ಸೌಹಾರ್ದತೆ, ಸಮರಸ ಬಾಳ್ವೆಯೊಂದಿಗೆ ಸಾಗುತ್ತಿದ್ದಾರೆ. ಇವರ ಮೂಲ ಇತಿಹಾಸಗಳನ್ನು ಅವಲೋಕಿಸುವುದಾದರೆ, ವಿಜಯನಗರ ಪತನವಾದ ನಂತರ ಅಸಂಘಟಿತರಾಗಿದ್ದು ಕೃಷಿ ಭೂಭಾಗಗಳ ಅನ್ವೇಷಣೆ ಮಾಡುತ್ತಾ, ದಕ್ಷಿಣ ಕಡೆ (ಐಗೂರು, ಶೃಂಗೇರಿ) ಈಗಿನ ಹಾಸನ, ಕನ್ನಡ ಜಿಲ್ಲೆ ಮತ್ತು ಕೊಡಗು ಜಿಲ್ಲೆಗಳಿಗೆ ಬಂದು ನೆಲೆಯೂರಿದರು. ಜನ ವಿರಳವಾಗಿಲ್ಲದ ಆ ಕಾಲದಲ್ಲಿ ಮಣ್ಣು ಯತೇಚ್ಛ ಅಂದರೆ ಭೂಮಿಯನ್ನು ಕೃಷಿಗಾಗಿ ಆರಿಸಿಕೊಂಡು ನೆಲೆಯೂರುತ್ತಾ ಈಗಿರುವ ಈ ಮಣ್ಣಿಗೆ ಬಂದು ಶತಮಾನಗಳೇ ಕಳೆದಿವೆ.

ಮೇಲೆ ಹೇಳಿರುವಂತೆ ವಿಜಯನಗರದ ಪತನದ ನಂತರ ಅಸಂಘಟಿತರಾಗಿದ್ದ ವೈಷ್ಣವ ಗೌಡ ಸಮುದಾಯವು ಚದುರಿ ಶಿವ ನೆಲೆಯಾದ ಶೃಂಗೇರಿ ಗುರುಮಠಾಧಿಗಳ ಅಧೀನದಲ್ಲಿ ಅವರ ಆಶೀರ್ವಚನದ ಅಡಿಯಲ್ಲಿ ಸಂಘಟಿತರಾಗಿ ಹತ್ತು ಕುಟುಂಬ ಹದಿನೆಂಟು ಗೋತ್ರಗಳ ಪುನಃರಚನೆಯನ್ನು ಹೊಂದಿರುವ ಸಾಧ್ಯತೆ ಇರಬಹುದೆಂದು ನಂಬಿಕೆ. ಇದಕ್ಕೆ ಕಾರಣ ಇಷ್ಟೆ. ಇಂದೂ ನಮ್ಮ ಅರೆಭಾಷೆ ಗೌಡರ ಮದುವೆಗಳಲ್ಲಿ ವರನು ವಧುವಿನ ಮುತ್ತೈದೆತನಕ್ಕೆ ನೀಡುವ ತೆರವಿನ ಹಣವನ್ನು ಶ್ರೀ ಶೃಂಗೇರಿ ಮಠಕ್ಕೆ ತೆಗೆದಿಡುತ್ತಾರೆ. ಆ ಕಾಲದಲ್ಲಿ ಕಾಲ್ನಡಿಗೆಯಲ್ಲಿ ಊರುಗೌಡ ಇಂತಹ ಶ್ರೇಷ್ಠ ತೆರವಿನ ಹಣವನ್ನು ಗುರುಗೆ ಒಪ್ಪಿಸುತ್ತಿದ್ದರು. ಕೊಡಗಿನಿಂದ ಈ ಕೆಲಸವನ್ನು ಕಟ್ಟೆಮನೆಸ್ಥಾನದವರು ಮಾಡುತ್ತಿದ್ದರು. ಈಗ್ಯೆ ಸುಮಾರಾಗಿ 1950ರ ಈಚೆಗೆ ಶೃಂಗೇರಿ ಗುರುವಿಗೆ ತೆರವಿನ ಹಣ ಒಪ್ಪಿಸುವ ಪದ್ಧತಿ ಸಂಪೂರ್ಣವಾಗಿ ನಿಂತು ಹೋಗಿವೆ ಎನ್ನಬೇಕು. ಶಾರದೆಯ ಕೃಪೆಗಾಗಿ ತೆರ ಒಪ್ಪಿಸಿ, ಸಂತೃಪ್ತಿ ಪಡೆಯುವುದು ಲೇಸೆಂದು ನನ್ನ ಭಾವನೆ. ಈಗ ಆ ಗುರುವಿನ ಹೆಸರಿನಲ್ಲಿ ಶ್ರೀ ಕುಲಗುರು ವೆಂಕಟರಮಣನ ಹುಂಡಿಗೆ 5ವರ್ಷಕ್ಕೊ 10 ವರ್ಷಕ್ಕೊ ಒಮ್ಮೆ ಹೋಗುತ್ತಿದೆ. ಈ ವಿಚಾರವೇ ಬೇರೆ. ಅದರ ಬಗ್ಗೆ ಪ್ರತ್ಯೇಕ ಲೇಖನದ ಅವಶ್ಯಕತೆ ಇದೆ.

ಕ್ರಿಸ್ತ ಪೂರ್ವದ ಪ್ರಾಚೀನ ಕಾಲದಲ್ಲಿ ಬಂಗಾಳಕ್ಕೆ ಗೌಡದೇಶ ಎಂದು ಹೆಸರಿತ್ತು. ದ್ರಾವಿಡ ಜನಾಂಗದ ಮೂಲಗೌಡ ಜನರು ಬಂಗಾಳದಲ್ಲಿ ನೆಲೆಸಿದ್ದು ಆರ್ಯರ ಒತ್ತಡಕ್ಕೆ ಬಲಿಯಾಗಿ ದಕ್ಷಿಣಕ್ಕೆ ವಲಸೆ ಬಂದು ಹೆಚ್ಚಾಗಿ ಕರ್ನಾಟಕದಲ್ಲಿ ನೆಲಸಿದರಷ್ಟೆ. ಗೋತ್ರದ ಪದ್ಧತಿಯಿಂದ ಕಟ್ಟುನಿಟ್ಟಿನ ಸುಂದರ ಸಂಸಾರದ ಕನಸನ್ನು ಕಾಣಲು ಕಾರಣವಾವಾಯಿತು. ಇದರ ಬಗ್ಗೆ ಆಳವಾದ ತಿಳುವಳಿಕೆ ಅವಶ್ಯ ಮತ್ತು ಸಂಶೋಧನೆ ಅತೀ ಮುಖ್ಯವಾಗಿದೆ. ಹಾಗಿದ್ದಾಗ ಮಾತ್ರ ವಿಶಿಷ್ಟ ಪರಂಪರೆ ಇರುವ ಸಂಸ್ಕೃತಿಯೊಂದು ಬೆಳಕಿಗೆ ಬರುವ ಸಾಧ್ಯತೆಗಳಿವೆ.

– ಬೈತಡ್ಕ ಬೆಳ್ಯಪ್ಪ

# ಕೊಡವರೆಂದರೆ ಯಾರು?

ಕೊಡವರ ಮೂಲವನ್ನು ಕುರಿತು ಜಿಜ್ಞಾಸೆ ನಡೆಯುತ್ತಲೇ ಇದೆ. ೧೭ನೇ ಶತಮಾನದವರೆಗೆ ಕೊಡವರನ್ನು ಕುರಿತು ಲಭ್ಯವಿರುವ ಐತಿಹಾಸಿಕ ಪುರಾವೆಗಳು ತೀರ ವಿರಳ. ಆ ಅವಧಿಯನ್ನು ಕುರಿತು ಐತಿಹಾಸಿಕ ಗ್ರಂಥಗಳಲ್ಲಿ ಕೊಡವರ ಪ್ರಸ್ತಾಪ ಇಲ್ಲವೇ ಇಲ್ಲ ಎಂದರೂ ತಪ್ಪಾಗಲಾರದು.

ಶವದ ಸಮಾಧಿಗಳಲ್ಲಿ ಕಂಡು ಬರುವ ಕಲ್ಲುಗಳು ಹಾಗೂ ಮಡಿಕೆ ಕುಡಿಕೆಗಳು ಕೊಡವರಿಗೆ ಸಂಬಂಧಿಸಿದ ಪುರಾವೆಗಳೆನಿಸಲಾರವು.

ಆದರೆ ಕೊಡಗಿನಲ್ಲಿರುವ ಯರವರು, ಜೇನು ಕುರುಬರು, ಕುಡಿಯರು ಇತ್ಯಾದಿ ಮೂಲ ನಿವಾಸಿಗಳ ಮಧ್ಯೆ ಕೊಡವರು ಪ್ರಬಲ ಜನಾಂಗ ಎಂಬುದಂತೂ ನಿಜ. ಕೊಡವರು ವಾಸಿಸುವ ಪ್ರದೇಶಕ್ಕೆ ಈ ಜನಾಂಗದ ಹೆಸರೇ ಅಂದರೆ "ಕೊಡಗು" ಎಂದಿರುವುದು ಐತಿಹಾಸಿಕವಾಗಿ ಮಹತ್ವದ ಅಂಶ.

ಆದ್ದರಿಂದ ಕೊಡವರ ಅಸ್ತಿತ್ವವು ಈ ನೆಲದೊಡನೆ ಅವಿಚ್ಛಿನ್ನ ಸಂಬಂಧ ಹೊಂದಿದೆ ಎಂಬುದಂತೂ ಈಗ ಸ್ಪಷ್ಟವಾದಂತಾಯಿತು. ಒಂದು ಅರ್ಥದಲ್ಲಿ ಇದು ಯಹೂದ್ಯರಿಗೆ ದೊರೆತ ಆಶ್ವಾಸಿಕ ಪ್ರದೇಶ. ಯಹೂದ್ಯರಿಗೆ ಇಸ್ರೇಲ್ ಹೇಗೋ, ಅದೇ ರೀತಿ ಕೊಡವರಿಗೆ ಕೊಡಗು. ಕೊಡವರು ವಾಸಿಸುವ ನಾಡು ಕೊಡಗು.

ಕೊಡವರು ಕ್ರಿಸ್ತಶಕ ಮೂರನೆಯ ಶತಮಾನದಲ್ಲಿ ಕೊಡಗಿಗೆ ವಲಸೆ ಬಂದರು. ಅಲ್ಲಿ ತಮ್ಮದೇ ಒಂದು ಪಾಳಯ ಸೃಷ್ಟಿಸಿಕೊಂಡು, ವಿಶಾಲವಾದ ಭೂಮಿಯನ್ನು ಆಕ್ರಮಿಸಿಕೊಂಡು, ಸ್ಥಳೀಯ ಮೂಲ ನಿವಾಸಿಗಳ ನೆರವಿನೊಂದಿಗೆ ಬೇಸಾಯ ನಡೆಸುತ್ತಿದ್ದರು ಎಂದು ಕೆಲವು ಇತಿಹಾಸಜ್ಞರು ಹೇಳುತ್ತಾರೆ. ಕೊಡವರಲ್ಲಿರುವ ಹೋರಾಟ ಕಲೆ, ಸುಂದರ ದೇಹಲಕ್ಷಣ ಗಮನಿಸಿದಾಗ ಕೊಡವರಿಗೆ ಇದು ಸಾಧ್ಯವಾಗಿರಬಹುದು ಎನಿಸುತ್ತದೆ.

"ಕಾವೇರಿ ಪುರಾಣ"ದಲ್ಲಿ ಅಥವಾ ಇನ್ನಾವುದೋ ಮಹಾ ಕಾವ್ಯದಲ್ಲಿ ಕೊಡವರ ಮೂಲವನ್ನು ಕುರಿತು ಮಾಡಿರುವ ವ್ಯಾಖ್ಯಾನವನ್ನು ಆಕಸ್ಮಿಕ ಅಥವಾ ಬ್ರಾಹ್ಮಣರ ಕಲ್ಪನಾ ವಿಕಾಸ ಎಂದು ನಾವು ಸಾರಸಗಟಾಗಿ ತಿರಸ್ಕರಿಸಿ ಬಿಡಬಹುದು.

ಅನೇಕ ಇತಿಹಾಸಜ್ಞರು ಈ ತೀರ್ಮಾನಕ್ಕೆ ಬಂದಿದ್ದಾರೆ. "ಕೊಡವರು ದಕ್ಷಿಣ ಭಾರತದ ಯಾವ ಜನಾಂಗವನ್ನೂ ಹೋಲುವುದಿಲ್ಲ. ಆದುದರಿಂದ ಅವರು ಹೊರಗಡೆಯಿಂದ ಬಂದವರು ಎಂಬುದು ಸ್ಪಷ್ಟವಾಗುತ್ತದೆ". ಸರ್ ಎರ್ಸನ್ ಪೆರಿಯವರ ಈ ಅಭಿಪ್ರಾಯವನ್ನು ಇನ್ನೋರ್ವ ಇತಿಹಾಸಜ್ಞ ಎಲ್. ಎ. ಕೃಷ್ಣ ಅಯ್ಯರ್‌ರವರು ತಮ್ಮ "ಕೊಡಗಿನ ಬುಡಕಟ್ಟು ಮತ್ತು ಜಾತಿಗಳು" (The Coorg Tribes and Castes)" ಎಂಬ ಪುಸ್ತಕದಲ್ಲಿ ಬೆಂಬಲಿಸಿದ್ದಾರೆ. ಅವರು ಮುಂದುವರೆದು ಹೀಗೆ ಹೇಳುತ್ತಾರೆ. "ದಕ್ಷಿಣ ಭಾರತದಲ್ಲೆಲ್ಲೂ ಕಾಣಸಿಗದ "ಅಪರೂಪದ ಹಾಗೂ ವರ್ಣರಂಜಿತ"ವಾದ ಉಡುಪನ್ನು ಧರಿಸುತ್ತಾರೆ. ಅಷ್ಟೇ ಏಕೆ, ಭಾರದಲ್ಲೆಲ್ಲೂ ಇಂತಹ ಉಡುಪು ಕಾಣಸಿಗುವುದಿಲ್ಲ".

ಕೊಡವರದು ನೀಳ ಮೂಗು, ದೊಡ್ಡತಲೆ ಎತ್ತರದ ನಿಲುವು ಹಾಗೂ ಗೌರವರ್ಣದ ಚರ್ಮ ಅವರ ವೈಶಿಷ್ಟ್ಯ.

ಅಮೇರಿಕೆಯಲ್ಲಿ ೨೦ ವರ್ಷಗಳಿಂದ ವಾಸಿಸುತ್ತಿರುವ ಮಹಿಳಾ ವೈದ್ಯರೊಬ್ಬರು ಒಂದು ಪ್ರಕರಣವನ್ನು ಕುರಿತು ನನಗೆ ಹೇಿದ್ದರು. ಅವರು ಹೇಳಿದುದನ್ನು ಕೇಳಿದ ಮೇಲೆ "ಕೊಡವರು ಅರೇಬಿಯರು" ಎಂಬ ಅಬ್ದುಲ್ ಗಫಾರ್ ಖಾನ್‌ರವರ ಗ್ರಂಥದಲ್ಲಿ ವ್ಯಕ್ತಪಡಿಸಲಾಗಿರುವ ಅಭಿಪ್ರಾಯಗಳು ಸರಿ ಎಂದು ನನಗೆ ಅನಿಸತೊಡಗಿರುವುದುಂಟು. ಅರಬರು ಹಾಗೂ ಕೊಡವರನಡುವಣ ವೇಷ ಭೂಷಣಗಳ ಸಾಮ್ಯತೆಯನ್ನು ಆಧರಿಸಿ ಕೊಡವರು ಅರೇಬಿಯದಿಂದ ವಲಸೆ ಬಂದವರು ಎಂಬ ವಾದ ಮಂಡಿಸಿದ್ದಾರೆ.

ಕೊಡವರು ಅಥವಾ ಇನ್ನಾವುದೇ ಜನಾಂಗದ ಮೂಲ ಅರಿಯಲು ಉಡುಪೇ ಬಲವಾದ ಪುರಾವೆ ಎನಿಸಲಾರದು. ಆದರೆ ಅದು ಮುಖ್ಯ ಎಂಬುದು ನಿಜ. ಕೊಡವರ ಐತಿಹಾಸಿಕ ಹಿನ್ನೆಲೆಯ ಬಗ್ಗೆ ಹೆಚ್ಚಿನ ಮಾಹಿತಿ ಇಲ್ಲದ ಈ ಮಹಿಳಾ ವೈದ್ಯರು ಹೇಳುವ ಪ್ರಕಾರ ಕೊಡವರು ಮೆಡಿಟರೇನಿಯನ್ ಪ್ರದೇಶದಿಂದ ಬಂದವರಾಗಿರಬೇಕು. ಅಂದರೆ ಮುಖ್ಯವಾಗಿ ಪ್ಯಾಲೆಸ್ಟೈನ್ ಅಥವಾ ಇಜಿಪ್ತಿನ ಇತ್ತರ ಭಾಗ ಅಥವಾ ಇದೇ ಅರಬ್ ಪ್ರದೇಶದಿಂದ ಬಂದವರಾಗಿರಬಹುದು. ಈ ವಾದ ಮಂಡಿಸಲು ಅವರಿಗೆ ಮೂರು ಕಾರಣಗಳಿವೆ.

ಮೊದಲನೆಯದು ಅಬ್ದುಲ್ ಗಫಾರ್ ಖಾನರ ಉಡುಪನ್ನು ಕುರಿತ ವಾದದಂತೆಯೇ ಇದೆ. ಕೊಡವತಿಯಾದ ಈ ವೈದ್ಯೆಗೆ ಕೊಡವರ ಉಡುಪು ಚಿರಪರಿಚಿತ- ಬಿಳಿಯ ನಿಲುವಂಗಿ, ಎರಡು ಮೂರು ಬಗೆಯ ಪೇಟ, ಒಂದಕ್ಕೆ ಹಿಂದೆ ಚುಂಗು, ಇತ್ಯಾದಿ. ಪ್ಯಾಲೆಸ್ಟೇನಿಯನ್ನರೂ ಧರಿಸುವ ಉಡುಪು ಇದೇ ಅಥವಾ ಬಹುತೇಕವಾಗಿ ಇದನ್ನು ಹೋಲುತ್ತದೆ. ಅವರ ಸಾಂಪ್ರದಾಯಿಕ ನೃತ್ಯಗಳೂ ಸಹ ಕೊಡವರ ನೃತ್ಯಗಳನ್ನು ಹೋಲುತ್ತವೆ ಎಂದು ನಾನು ಕೇಳಿದ್ದೇನೆ.

ಅದು ಈಗ ಒತ್ತಟ್ಟಿಗಿರಲಿ, ಜೈವಿಕವಾಗಿಯೂ (genetically) ಪ್ಯಾಲೆಸ್ಟೇನಿಯನ್ನರು ಹಾಗೂ ಕೊಡವರ ನಡುವೆ ಸಾಮ್ಯತೆ ಇದೆ ಎಂದು ಈ ವೈದ್ಯೆ ಬಲವಾಗಿ ವಾದಿಸುತ್ತಾರೆ. ಪ್ಯಾಲೆಸ್ಟೇನಿಯನ್ನರಲ್ಲಿ ವ್ಯಾಪಕವಾಗಿ ಕಂಡು ಬರುವ ರಕ್ತ ಕಣಗಳ ವ್ಯಾಧಿಯು ಕೊಡವರಲ್ಲಿಯೂ ಕಂಡುಬರುತ್ತದೆ ಎಂದು ಅವರು ಹೇಳುತ್ತಾರೆ.

ಜೈವಿಕವಾಗಿಯೂ ಕೊಡವರು ಪ್ಯಾಲೆಸ್ಟೇನಿಯನ್ನರ ಪ್ರದೇಶದೊಡನೆ ಸಂಬಂಧ ಹೊಂದಿದ್ದಾರೆ ಎಂದು ನಾವು ಇದರಿಂದ ಭಾವಿಸಬಹುದು. ತಾಲ ಸೇಮಿಯ ಮತ್ತು ಸಿಕ್ಕಲ್ ತಾಲಸೇಮಿಯ ಎಂಬ ಈ ವ್ಯಾಧಿಯು ಪ್ಯಾಲೆಸ್ಟೇನಿಯನ್ನರಂತೆ ಕೊಡವರಲ್ಲೂ ಸರ್ವೇಸಾಮಾನ್ಯ. ಒಕ್ಕಲಿಗರಾಗಲೀ, ಇತರ ಯಾವುದೇ ಜನಾಂಗದಲ್ಲಾಗಲೀ ಈ ವ್ಯಾಧಿ ಕಂಡು ಬರುವುದಿಲ್ಲ. ಕೊಡಗಿನ ಗಡಿಯಾಚೆಗೂ ಇಲ್ಲ.

ತಾಲಸೇಮಿಯ ಅನುವಂಶಿಕ ವ್ಯಾಧಿ. ಕೆಂಪು ರಕ್ತ ಕಣಗಳಿಗೆ ಸಂಬಂಧಿಸಿದ್ದು, ಈ ಕಣಗಳು ಸಣ್ಣ ರಕ್ತನಾಳಗಳಲ್ಲಿ ಸುಲಭವಾಗಿ ಹರಿಯುವುದಿಲ್ಲ. ಹಾಗಾದಾಗ ರಕ್ತನಾಳಗಳಲ್ಲಿ ಅಡ್ಡಿ ಯುಂಟಾಗುತ್ತದೆ. ರಕ್ತ ಪರಿಚಲನವನ್ನು ಒಂದೋ ನಿಲ್ಲಿಸಿಬಿಡುತ್ತದೆ ಇಲ್ಲವೇ ಕುಗ್ಗಿಸುತ್ತದೆ. ಅದರಿಂದ ರೋಗಿಗೆ ನೋವು, ಊತ,

ಂಗರಿನ್, ಅನೀಮಿಯ, ಕೆಲವೊಮ್ಮೆ ಪಾರ್ಶ್ವವಾಯು ಕೂಡ ಬಲಬಹುದು.

ಈ ವ್ಯಾಧಿಯು ಮುಖ್ಯವಾಗಿ ಮೆಡಿಟರೇನಿಯನ್ ದೇಶದಿಂದ ಬಂದ ಪೂರ್ವಜರ ಮಕ್ಕಳಲ್ಲಿ ಹೆಚ್ಚಾಗಿ ಕಂಡು ತ್ತದೆ.

ಇದಕ್ಕೆ ಅಷ್ಟೇನೂ ಸಂತಸದಾಯವಲ್ಲದ ಇನ್ನೊಂದು ರಾವೆಯನ್ನು ಸೇರಿಸಬಹುದು. ಕೆಲವು ಪ್ರಕರಣಗಳಲ್ಲಿ ಜೈವಿಕ netical), ಮದ್ಯಪಾನ ಸಮಸ್ಯೆ ಕೊಡವರಲ್ಲಿ ಕಂಡು ಬರುತ್ತದೆ. ೇ ರೀತಿ ಪ್ಯಾಲೇಸ್ಟೇನಿಯನ್ನರಲ್ಲೂ ಇದು ಸಾಮಾನ್ಯ. ಇದರರ್ಥ ಲೆಸ್ಟೇನಿಯನ್ನರು ಮದ್ಯಪಾನಾಸಕ್ತರು ಎಂದಲ್ಲ. ಮಧ್ಯಪಾನಕ್ಕೆ ಚಯಿಸಿದಾಗ ಅದರ ವ್ಯಸನಕ್ಕೊಳಗಾಗುವುದಕ್ಕೆ ಈ ಆರೋಗ್ಯ ಬಂಧಿಸಿದೆ.

ಪ್ಯಾಲೆಸ್ಟೇನಿಯನ್ನರಿಗೆ ಕೊಡವರ ಸಂಬಂಧ ಕಲ್ಪಿಸಲು ಇನ್ನೂ ದು ಕಾರಣ ಇದೆ. ಈ ವೈದ್ಯೆಯ ಪ್ರಕಾರ, ಅವರ ಆಸ್ಪತ್ರೆಯಲ್ಲಿ ಟ್ಟ ಕೆಲವು ಪ್ಯಾಲೆಸ್ಟೇನಿಯನ್ನರು ಮಂದಣ್ಣ, ಮುತ್ತಪ್ಪ, ಮೇದಪ್ಪ ಬ ಹೆಸರುಗಳನ್ನು ಹೊಂದಿದ್ದರು. ಇವು ಕೊಡವರಲ್ಲಿ ಸರ್ವೇ ಮಾನ್ಯ ಹೆಸರುಗಳು.

ಮುಸ್ತಾಫಾ ಎಂಬ ಹೆಸರನ್ನೇ ತೆಗೆದುಕೊಳ್ಳಿ. ಮುತ್ತಪ್ಪ ಬುದು ಮುಸ್ತಾಫಾ ಎಂಬ ಹೆಸರಿನ ಅಪಭ್ರಂಶವಾಗಿರಬಹುದು. ನ್ನೂ ಕೆಲವು ಹೆಸರುಗಳು ಹೀಗಾಗಿರಬಹುದು.

ಆದರೆ, ಭಾಷೆಯ ವಿಷಯ ಹೇಗೆ? ದ್ರಾವಿಡ ಭಾಷೆಗಳ ಶ್ರಣವಾದ ಕೊಡವ ಭಾಷೆಯಲ್ಲಿ ಪ್ಯಾಲೆಸ್ಟೇನಿಯನ್ನರು ಆಡುವ ಷೆಯ ಒಂದು ಪದವೂ ಇಲ್ಲ. ಶತಮಾನಗಳು ಕಳೆದಂತೆ ಕೊಡಗಿಗೆ ಂದ ಪ್ಯಾಲೆಸ್ಟೇನಿಯನ್ನರು ನೆರೆಹೊರೆಯ ಭಾಷೆಗಾಗಿ ತಮ್ಮ ಷೆಯನ್ನೇ ಕಡೆಗಣಿಸಿರುವ ಸಾಧ್ಯತೆಗಳಿವೆ. ಹೊಸದಾಗಿ ಕೊಡವ ್ಕ ಹುಟ್ಟಿದ್ದೇ ಹಾಗೆ, ಅದು ಭಾಷೆಯಲ್ಲ.

ಕೊಡವರು ಪಶ್ಚಿಮ ಏಷ್ಯದ ಪರ್ವತ ಪ್ರದೇಶಗಳಲ್ಲಿ ಸಿಸುತ್ತಿದ್ದ ಕುರ್ದ್ ಜನಾಂಗವೂ ಆಗಿರಬಹುದು ಎಂಬ ವಾದವೂ ದೆ. ಆದ್ದರಿಂದಲೇ ಅವರು ಕೊಡಗಿನ ಗಿರಿ ಪ್ರದೇಶದಲ್ಲಿ ಸಿಸಿರಬೇಕು. ಕುರ್ದ್ ಎಂಬ ಮೂಲಪದದಿಂದ ಕೊಡಗು ಎಂಬ ಸರು ಬಂದಿರಬೇಕು. ಕುರ್ದ್ ಜನಾಂಗ ವಾಸಿಸುವ ಪ್ರದೇಶ ರ್ದಿಸ್ತಾನ್ ಆಗಿರುವಂತೆ ಕೊಡವರು ಇರುವ ಪ್ರದೇಶ ಕೊಡಗು ಗಿರಬಹುದು.

ಈಗ ಒಂದು ವ್ಯಾವಹಾರಿಕ ಜ್ಞಾನದ ಪ್ರಶ್ನೆ. ಕೊಡಗು ದಟ್ಟ ರಣ್ಯದ, ಗಿರಿ ಪ್ರದೇಶ, ಕಾಡು ಪ್ರಾಣಿಗಳಿರುವ, ಭಾರೀ ಮಳೆಯ ದೇಶ. ೭೦೦೦ ಮೈಲು ದೂರದಲ್ಲಿರುವ ಪ್ಯಾಲೆಸ್ಟೇನಿಯನ್ನರು ಲ್ಲಿಗೆ ಹೇಗೆ ಬಂದರು, ಹೇಗೆ ನೆಲೆ ನಿಂತರು?

ನೌಕಾಯಾನ ಮಾಡುವ ಗಿರಿಜನರ ಗುಂಪೊಂದು ಕ್ರಿ. ಶ. ಮೂರು ಅಥವಾ ನಾಲ್ಕನೆಯ ಶತಮಾನದಲ್ಲಿ ಅಥವಾ ಕ್ರಿ. ಶ. ಪೂರ್ವದಲ್ಲಿ ಪ್ಯಾಲೆಸ್ಟೇನ್ ಕರಾವಳಿಯಿಂದ ಹೊರಟು (ಆಗ ಈ ಪ್ರದೇಶದಲ್ಲಿ ಇಸ್ಲಾಂ ಇರಲಿಲ್ಲ.) ಹಡಗು ಕೇರಳ ಕರಾವಳಿಯ ಣ್ಣಾನೂರು ಬಳಿ ಅಪಘಾತಕ್ಕೊಳಗಾಗಿ ದಡ ತಲುಪಿ, ಕೊಡಗನ್ನು ಪ್ರವೇಶಿಸಿರಬಹುದು.

ಕೊಡವರ ಕೆಲವು ಮನೆತನದ ಹೆಸರುಗಳು ಕಣ್ಣಾನೂರಿನ (ಕೇರಳ) ಮನೆತನದ ಹೆಸರುಗಳನ್ನು ಹೋಲುತ್ತವೆ. ಇದು ಕೊಡಗು ಹಾಗೂ ಕೇರಳ ಕರಾವಳಿಯ ನಡುವಣ ಸಂಬಂಧವನ್ನು ಸೂಚಿಸುತ್ತದೆ.

ಇದನ್ನೆಲ್ಲ ಗಮನಿಸಿದಾಗ, ಕೊಡವರು ತಮ್ಮ ಮೂಲವನ್ನು ಅರಿಯಬೇಕಾದರೆ ಸಂಶೋಧನೆಗಾಗಿ ಅವರೊಂದು ಪ್ರತಿಷ್ಠಾನವನ್ನು ಸ್ಥಾಪಿಸಬೇಕು. ಇದರ ಬಗ್ಗೆ ಅಧ್ಯಯನ ಮಾಡಲು ಆಸಕ್ತಿ ಇರುವ ಸಂಶೋಧಕರಿಗೆ ಹಣಕಾಸು ನೆರವು ನೀಡಬೇಕು.

**ಕೆ. ಬಿ. ಗಣಪತಿ (ಸಂಪಾದಕ)**

ಕೃಪೆ : ಮೈಸೂರು ಮಿತ್ರ ದಿನಾಂಕ : 13-1-1999

---

# ಮೇಪತ ಹೈದ

ನಮ್ಮಲ್ಲಿತ್ತ್ ಮೇಪತ ಹೈದ
ನೋಡಿಕೆ ಭಾರಿ ಸೋಕುನ ಹೈದ
ಬುದ್ಧಿಲಿ ಮಾತ್ರ ಮೈಂದ ಹೈದ
ದನಗಳ ಹೊಡ್ಕಂಡ್ ಗುಡ್ಡೆಗೆ ಹೋದು
ಹೋಕನ ಅಡ್ಕೆನ ಹೆಕ್ಕಂಡ್ ಹೋದು
ಗುಡ್ಡೆನ ಕರೆನ ಅಂಗಡಿಗೆ ಹೋದು
ಚಾಯ, ಕಾಫಿ, ಕುಡ್ಕಂಡ ಇರ್ದು ||

ಹಿಂಬತ್ತ್ ಬಾಕನ ದನಗಂಳು ಇಲ್ಲೆ
ಕೇಳ್ದೆ ಅಂವ ಹೇಳ್ದು ಉಮ್ಮಪ್ಪ ಗೊತ್ತಿಲ್ಲೆ
ದನಂಗ ಎಲ್ಲ ಮೇದ್‌ಕಂಡ್ ಇದ್ದೊ
ಮರದ ಬುಡಲಿ ನಾ ಕುದ್ದ್‌ಕಂಡ್ ಇದ್ದೆ ||

ಬೀಜದ ಸಮಯಲಿ ಹೆಕ್ಕಿಕೆ ಹೋದು
ಕೊಡಿಗೆ ಹತ್ತಿದ್ ಗೆಲ್ಲ್‌ನೆ ಕಡಿಯೊದು
ಕರೆಲಿ ಇದ್ದ ಬಾಳೆ ಮರ ಕಮ್ಮು ಹತ್ತುದು
ಬೆಂಡನ ಕಾಯಿಗ ಬಿಡ್‌ಗಿಸಿ ಇಡ್ಡು ||

ಕರುಗಳ ಮೇಯ್ಸಿಕೆ ತೋಟಕೆ ಹೋದು
ಕಮ್ಮುನ ದೈನ ಚಿರಿಗೆ ಕಡಿಯೊದು
ಕೇಳಿರೆ ಅಂವ ಸುಳ್ಳ್‌ನೆ ಹೇಳ್ದು
ಮತ್ತೊಮ್ಮೆ ಹೇಳ್ದ್, ಸುಮ್ಮನೆ ಕಡ್ದೆ ||

ಉಂಬಕೆ ಮಾತ್ರ ಭಾರೀ ಬಿಸಣ
ಪ್ರಾಯಲಿ ಮಾತ್ರ ಹದ್ನಾಲ್ಕ್ ವಸಣ
ಯಾರೂ ಇಲ್ಲದ ತಬ್ಬಲಿ ಕೂಸು
ಮಾತ್‌ಲಿ ಮಾತ್ರ ಭಾರೀ ಪೋಸುಕಾ ||

ಅಜ್ಜಿನೆ ಕುದ್ರ್‌ಸಿ ಬುದ್ಧಿನೆ ಹೇಳ್ದು
ಇಲ್ಲದ ಬುದ್ಧಿನ ಎಲ್ಲಿಂದ ತಾದು
ಹಂಞ ಹೇಳಿರೆ ಅಂವ ಮರ್ತ್‌ಕಂಡ್ ಇರ್ದು
ಹುಚ್ಚತನ ಬಂದದ್ ಕೊಳ್ಳಿಲಿ ಹೋದು ||

**ಶ್ರೀಮತಿ ನಿಡ್ಯಮಲೆ ವೇದಾವತಿ ಅನಂತ**

* * * * * * * * * * * * * * * * * * * *

# ರಾಷ್ಟ್ರಕ್ಕೆ ಆತ್ಮಾರ್ಪಿಸಿದ ಕೊಡಗಿನ ವೀರ ಸೇನಾ ಸುಬೇದಾರ್ ಸಿಂಗೂರ್ ಕುಟ್ಟಪ್ಪ ಮೇದ



ಕಾರ್ಗಿಲ್ ಭರತಖಂಡದ ಶಿರದ ಮುಕುಟ ಮಣಿ. ಮೇ 4ರ ರಾತ್ರಿ ದುರುಳರ ಆಕ್ರಮಣಕ್ಕೆ ತುತ್ತಾದ ಕಾರ್ಗಿಲ್ ಘರ್ಷಣೆಯಿಂದ ನಲುಗಿ, ರಾತ್ರಿಯ ನೀರವ ವಾತಾವರಣಕ್ಕೆ ಮರುಳತೊಡಗಿತ್ತು. ದೇಶ ರಕ್ಷಣೆಗಾಗಿ ಗಡಿಯಲ್ಲಿ ನಿಯೋಜಿತವಾಗಿದ್ದ ಸುಬೇದಾರ್ ಮೇದಪ್ಪ ಎಡೆಬಿಡದೆ ಕಾರ್ಯಾಚರಣೆಯಲ್ಲಿ ತೊಡಗಿ, ಬಳಲಿ ಬೆಂಡಾಗಿ ವಿಶ್ರಾಂತಿಗಾಗಿ ತಮ್ಮ ಶಿರಸ್ತ್ರಾಣವನ್ನು ತೆಗೆದಿರಿಸುತ್ತಿದ್ದಂತೆಯೇ ಗಾಢಕತ್ತಲನ್ನು ಮಿಂಚೊಂದು ಸೀಳಿತ್ತು. ಸ್ಮಶಾನ ಮೌನವನ್ನು ಭೇದಿಸಿ ಬಾಂಬೊಂದು ಸಿಡಿಯಿತು. ದೇಶ ರಕ್ಷಣೆಯ ಸ್ತಂಭವೊಂದು ನೆಲಕ್ಕುರುಳಿತು. ಸುಮಾರು ಇಪ್ಪತ್ಮೂರು ವರ್ಷಗಳಿಂದ ಭಾರತದ ಸೇನೆಯಲ್ಲಿ ದುಡಿದ ಸಿಂಗೂರು ಮೇದಪ್ಪನವರ ತಲೆಯ ಹಿಂಭಾಗಕ್ಕೆ ಪೆಟ್ಟು ಬಿದ್ದು ಸುಮಾರು ಒಂದು ತಿಂಗಳ ಕಾಲ ಸಾವು ಬದುಕಿನ ನಡುವೆ ಹೋರಾಡಿ ಜೂನ್ ಒಂದರಂದು ಈ ರಾಷ್ಟ್ರಕ್ಕೆ ತಮ್ಮನ್ನು ಅರ್ಪಿಸಿಕೊಂಡರು.

ಕೊಡಗು ಮೊದಲಿನಿಂದಲೂ ಹಾಗೆಯೇ. ಇದು ವೀರ ಸಾಹಸಿಗಳ ನಾಡು. ರಾಷ್ಟ್ರರಕ್ಷಣೆಗಾಗಿ, ಸ್ವಾಭಿಮಾನ ರಕ್ಷಣೆಗಾಗಿ ಎಂತಹ ತ್ಯಾಗಕ್ಕೂ ಸಿದ್ಧರಿರುವ ಜನ ಇಲ್ಲಿಯವರು. ಆದುದರಿಂದಲೇ ಕೊಡಗು ಜಿಲ್ಲೆಗೆ ರಾಷ್ಟ್ರದಲ್ಲೇ ವಿಶಿಷ್ಟ ಸ್ಥಾನವಿದೆ. ಈ ರಾಷ್ಟ್ರದ ರಕ್ಷಣೆಗಾಗಿ ಇಲ್ಲಿನ ಹಲವಾರು ಯೋಧರು ಸೇವೆ ಸಲ್ಲಿಸುತ್ತಲೇ ಬರುತ್ತಿದ್ದಾರೆ. ಹಲವಾರು ಜನ ರಾಷ್ಟ್ರಕ್ಕಾಗಿ ವೀರ ಬಲಿದಾನಗೈದಿದ್ದಾರೆ. ಈಗ ಇವರ ಸಾಲಿಗೆ ಜಿಲ್ಲೆಯ ಐಗೂರಿನ ಸಿಂಗೂರ್ ಮೇದಪ್ಪನವರೂ ಸೇರಿದ್ದಾರೆ.

1976ರಲ್ಲಿ ಭಾರತೀಯ ಸೇನೆಗೆ ಸೇರಿದ ಇವರು ಸೇನೆಯ ವಿವಿಧ ಹಂತಗಳಲ್ಲಿ ದುಡಿದು, ಇದೇ ಮೇ ತಿಂಗಳ ಕೊನೆಯಲ್ಲಿ ನಿವೃತ್ತಿಯಾಗಿ ಸ್ವಗ್ರಾಮಕ್ಕೆ ತೆರಳಲಿದ್ದರು, ಆದರೆ ವಿಧಿಯ ಆಜ್ಞೆಗೆ ತಲೆಬಾಗಿ, ರಾಷ್ಟ್ರಕ್ಕೆ ತಮ್ಮನ್ನು ಸಂಪೂರ್ಣ ಅರ್ಪಿಸಿ ಹುತಾತ್ಮರಾಗಿದ್ದಾರೆ. ಕೊಡಗು ಜಿಲ್ಲೆಯ ಐಗೂರಿನ ಸಿಂಗೂರ್ ಕುಟ್ಟಪ್ಪ ಮತ್ತು ಅಕ್ಕಮ್ಮ ದಂಪತಿಗಳ ಹೆಮ್ಮೆಯ ಪುತ್ರರಾದ ಇವರು ತಂದೆ, ತಾಯಿ, ನಾಲ್ವರು ಸಹೋದರರು, ಒಬ್ಬ ಸಹೋದರಿ ಮತ್ತು ಅಪಾರ ಬಂಧುಬಳಗ ಅಭಿಮಾನಿಗಳನ್ನು ಅಗಲಿದ್ದಲ್ಲದೆ, ನಾಪೋಕ್ಲುವಿನಲ್ಲಿ ದಾದಿಯಾಗಿರುವ ಪತ್ನಿ ಪಾರ್ವತಿ ಮತ್ತು ನೆಲ್ಯಾಡಿಯಲ್ಲಿ ಎಸ್ಸೆಸ್ಸೆಲ್ಸಿ ಓದುತ್ತಿರುವ ಏಕಮಾತ್ರ ಪ
ಸುಬ್ರಮಣಿಯವರನ್ನು ಅಗಲಿದ್ದಾರೆ.

**ಪಾಕ್ ಕುಮ್ಮಕ್ಕು :** ಪ್ರಸ್ತುತ ಕಾರ್ಗಿಲ್ ಸಮಸ್ಯೆಗೆ ಪಾಕಿಸ್
ಕಾರಣವಾಗಿದೆ. 1947ರಲ್ಲಿ ಭಾರತ, ಪಾಕಿಸ್ತಾನ ಸ್ವತಂ
ರಾಷ್ಟ್ರಗಳಾದಾಗಲಿಂದಲೇ, ಪಾಕಿಸ್ತಾನ, ಭಾರತದ ಶಾಂತಿಮಂತ್ರವ
ದುರುಪಯೋಗ ಮಾಡಿಕೊಂಡು, ಪರೋಕ್ಷವಾಗಿ ಭಾರತದ ಮೆ
ಯುದ್ಧ ಹೂಡುತ್ತಲೇ ಬಂದಿದೆ. 1948, 1965, 1971ರಲ್ಲಿ ನ
ಮುಖಾಮುಖಿ ಹೋರಾಟ ಎರಡೂ ರಾಷ್ಟ್ರಗಳ ನಡುವೆ ನಡೆದ
ಭಾರತ ಪಾಕಿಸ್ತಾನಕ್ಕೆ ತಕ್ಕಪಾಠ ಕಲಿಸಿದೆ. ಆದರೆ 1948ರಲ್ಲಿ ಭಾ
ಕಾಶ್ಮೀರ ಸಮಸ್ಯೆಯನ್ನೂ ವಿಶ್ವಸಂಸ್ಥೆಗೆ ಕೊಂಡೊಯ್ದಾಗ, ವಿಶ್
ಕೆಲವು ಬಲಿಷ್ಠ ರಾಷ್ಟ್ರಗಳ ಸಂಚಿನಿಂದ ಭಾರತಕ್ಕೆ ನಷ್ಟವಾಯಿತಲ್
ಸಮಸ್ಯೆ ಇಂದಿನವರೆಗೂ ಮುಂದುವರಿಯುತ್ತಾ ಬರುವಂತಾಯಿ
1972ರಲ್ಲಿ ಇಂದಿರಾಗಾಂಧಿ ಮತ್ತು ಜುಲ್ಫಿಕರ್ ಆಲಿ ಭುಟ
ನಡುವೆ ಸೀಮ್ಲಾ ಒಪ್ಪಂದವಾದರೂ, ಆ ಒಪ್ಪಂದವನ್ನು ಪಾಕಿಸ್ತಾ
ಸಂಪೂರ್ಣವಾಗಿ ಜಾರಿಗೆ ತರಲಿಲ್ಲ. ಇಲ್ಲೂ ಸಹ ಭಾರತವು ಕೆ
ವಿಷಯಗಳಿಗೆ ಕಣ್ಣುಮುಚ್ಚಿ ಒಪ್ಪಿಗೆ ನೀಡಿ ಎಡವಿತ್ತು. ಪ್ರಸ್
ವರ್ಷದ ಫೆಬ್ರವರಿಯಲ್ಲಿ ಭಾರತ, ಪಾಕಿಸ್ತಾನಗಳ ನಡುವೆ ಲಾಹೋ
ಒಪ್ಪಂದವಾಗಿದ್ದರೂ, ಶಾಂತಿಯನ್ನು ಕಾಪಾಡ ಬೇಕಾಗಿದ್ದ ಪಾಕಿಸ್ತಾ
ತನ್ನ ಆಕ್ರಮಿತ ಪ್ರದೇಶವನ್ನು ದುರುಪಯೋಗ ಪಡಿಸಿಕೊಂ
ಭಾರತದ ಪ್ರದೇಶವಾದ ಕಾರ್ಗಿಲ್, ಡ್ರಾಸ್, ಬಟಾಲಿಕ್ ಮೊದಲ
ಆಯಕಟ್ಟಿನ ಪ್ರದೇಶಗಳಲ್ಲಿ ಆಫ್ಘನ್ ಉಗ್ರಗಾಮಿಗಳಿಗೆ ತ
ನೆಲೆಯನ್ನು ಸ್ಥಾಪಿಸಲು ಅನುವು ಮಾಡಿದ್ದಲ್ಲದೆ ಕಾಶ್ಮೀರವ
ಆಕ್ರಮಿಸಲು ಹೊಂಚು ಹಾಕಿತ್ತು. ಇದನ್ನು ಅಡಗಿಸಲು ಭಾರತ
ಯಶಸ್ವಿಯಾಗಿ 'ವಿಜಯ್' ಕಾರ್ಯಾಚರಣೆಯನ್ನು ಕೈಗೊಂಡಿ
ಆಕ್ರಮಣಕಾರರನ್ನೂ ಹೊರ ಹಾಕುವಲ್ಲಿ ಯಶಸ್ವಿಯಾಗಿ
ಇದುವರೆಗಿನ ಭಾರತದ ಕಾರ್ಯಚರಣೆಯಲ್ಲಿ ಉಗ್ರಗಾಮಿ
ಸೊಕ್ಕನ್ನು ಮುರಿಯಲಾಗಿದೆ. ಆದರೂ ದುರ್ಗಮವಾ
ಪ್ರದೇಶದಲ್ಲಿನ ಕಾರ್ಯಾಚರಣೆಯಿಂದಾಗಿ ಭಾರತದ 75 ಕ್ಕೂ ಹೆ
ಸೈನಿಕರು ಹುತಾತ್ಮರಾಗಿದ್ದು, 250ಕ್ಕೂ ಹೆಚ್ಚು ಮಂ
ಗಾಯಗೊಂಡಿದ್ದಾರೆ. ಈ ಕಾರ್ಯಾಚರಣೆಯಲ್ಲಿ ಕೊಡಗಿನ ನೂರಾ
ಯೋಧರು ತಮ್ಮ ಪ್ರಾಣದ ಹಂಗನ್ನು ತೊರೆದು ಪಾಲ್ಗೊಂಡಿದ್ದಾ
ಎಂದು ಸಂಗಾತಿಗೆ ತಿಳಿದುಬಂದಿದೆ.

ಈ ರಾಷ್ಟ್ರರಕ್ಷಣೆಯ ಸಮರದಲ್ಲಿ ಪಾಲ್ಗೊಂಡು, ರಾಷ್ಟ್ರ
ತನ್ನ ಆತ್ಮಾರ್ಪಣೆ ಮಾಡಿದ ಸಮರವೀರ ಸಿಂಗೂರ್ ಮೇದಪ್ಪನವ
ಆತ್ಮಕ್ಕೆ ಚಿರಶಾಂತಿ ದೊರೆಯಲಿ, ಅವರ ತ್ಯಾಗದ ಬಲಿದಾನ ನವ
ವೀರಯೋಧರ ಧೈರ್ಯ ಸಾಹಸಗಳನ್ನು ಉದ್ದೀಪನಗೊಳಿಸಲ
ಎಲ್ಲರಲ್ಲೂ ರಾಷ್ಟ್ರಭಕ್ತಿಯು ನೂರ್ಮಡಿಗೊಳ್ಳಲು ಪ್ರೇರಣೆಯಾಗ
ಅಖಂಡ ಭವ್ಯ ಭಾರತಕ್ಕೆ ಯಾವ ಸೋಂಕು ತಟ್ಟದಿರಲಿ ಎಂಬು
ಸಂಗಾತಿಯ ಚಿರಂತನ ಬಯಕೆಯಾಗಿದೆ.

– ಪಟ್ಟಡ ಶಿವಕುಮಾ

# ತ್ರ ವಿಭಾಗ :



## ಉತ್ತರ -1

### ಸಂಚಿಕೆ 11ರ ಜೂನ್ 1-15ಕ್ಕೆ ಸಮಜಾಯಿಷಿಕೆ

### ಾತಿಯನ್ನು ಕೊಡುವಾಗ "ಗೌಡ" ರೆಂದು ಕೊಡುವ ಬಗ್ಗೆ

ಕೊಡಗು ಮತ್ತು ದಕ್ಷಿಣ ಜಿಲ್ಲೆಯಲ್ಲಿ ನೆಲಸಿರುವ "ಗೌಡರ" ತಿಯ ಹೆಸರು "ಹಾಲು ಒಕ್ಕಲು ಮಕ್ಕಳು" ಎಂಬುದಾಗಿದ್ದು ಮಾನ್ಯವಾಗಿ ಈ ಎರಡು ಜಿಲ್ಲೆಗಳಲ್ಲಿ ಮಕ್ಕಳನ್ನು ಶಾಲೆಗೆ ರಿಸುವಾಗ "ಗೌಡ" ಎಂಬುದಾಗಿ ಜಾತಿ ಹೆಸರನ್ನು ಕೊಡುತ್ತಾರೆ. ದೇ ರೀತಿ ಜಾತಿ ಸರ್ಟಿಫಿಕೇಟನ್ನು ಕೇಳುವಾಗ "ಗೌಡ" ಎಂಬುದಾಗಿ ರೆಯುತ್ತಾರೆ. ಕಾರಣವೇನೆಂದರೆ ಕೊಡಗು ಮತ್ತು ದಕ್ಷಿಣ ನ್ನಡದಲ್ಲಿರುವ ಗೌಡರ ಜಾತಿ "ಹಾಲು ಒಕ್ಕಲು ಮಕ್ಕಳು" ಎಂಬುದಾಗಿದ್ದರೂ ಅವರ ಜಾತಿ ಹೆಸರನ್ನು ಒಕ್ಕಲಿಗರಲ್ಲಿ ೇಳಿಕೊಳ್ಳುವಂತೆ, ಗಂಗಡಿಕಾರ, ಬೆಳ್ಳೊಡೆ, ಮರಸ್ಸು, ಂಚಟಿಗರೆಂದು ಕರೆಯುವುದಿಲ್ಲ. ಇವರೆಲ್ಲ ಒಕ್ಕಲಿಗರೆಂದು ಮುಖ್ಯ ಾತಿಯಲ್ಲಿ ಬರುತ್ತಾರೆ. ಗೌಡರೂ ಒಕ್ಕಲಿಗರೆಂಬ ಮುಖ್ಯ ಾತಿಯಲ್ಲಿ ಬಂದರೂ ಅವರ ಜಾತಿಯ ಹೆಸರನ್ನೂ "ಹಾಲು ಒಕ್ಕಲು ಕ್ಕಳು" ಎಂದು ಹಾಕಿಕೊಳ್ಳುವುದಿಲ್ಲ. ಬರೇ ಗೌಡ ಎಂಬುದಾಗಿ ರೆಯಬೇಕು ಎಂದು ಹೇಳುವುದಕ್ಕೆ ಕಾರಣವೇನೆಂದರೆ ಕೊಡಗು ುತ್ತು ದಕ್ಷಿಣ ಕನ್ನಡ ಜಿಲ್ಲೆಯಿಂದ ಹೊರಗೆ ಇರುವ "ಗೌಡರು" ಕೊಡಗಿನ ಗೌಡ", ದಕ್ಷಿಣ ಕನ್ನಡ ಜಿಲ್ಲೆಯ ಗೌಡ, ಸುಳ್ಯದ ಗೌಡ ಂದು ಸೇರಿಸಿಕೊಂಡರೆ ಸರ್ಟಿಫಿಕೇಟ್ ತೆಗೆಯುವಾಗ ಆ ರೀತಿ ಾಕಿದರೆ ಸರ್ಟಿಫಿಕೇಟ್ ಕೊಡುವುದಿಲ್ಲ. ಕಾರಣ ಸರಕಾರದ ಟ್ಟಿಯಲ್ಲಿ ಕೊಡಗಿನ ಗೌಡ, ದಕ್ಷಿಣ ಕನ್ನಡ ಗೌಡ ಎಂಬುದಾಗಿರದೆ ರೆ "ಗೌಡ" ಎಂಬುದಾಗಿರುತ್ತದೆ.

## ಉತ್ತರ -2

### ಅರಮನೆ - ಗುರುಮನೆ

ಇದರಲ್ಲಿ ಬರೆದ ವಿಷಯ ವಾಸ್ತವ ಸಂಗತಿ. ಕಾರಣವೇನೆಂದರೆ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ "ಗೌಡ" ಎಂಬುವರು ವಿಜಯನಗರ ಸಾಮ್ರಾಜ್ಯವು ತಾಳಿಕೋಟೆ ಯುದ್ಧದಲ್ಲಿ ಪತನ ವಾಗುವವರೆಗೆ ಈ ಗೌಡರು ಈಗಿನ ಹಂಪೆಯ ವಿಜಯನಗರದ ಸುತ್ತ ಮುತ್ತಲಿನ ಪ್ರದೇಶದಲ್ಲಿ ವಾಸವಾಗಿದ್ದರೆಂದೂ, ವಿಜಯನಗರದ ರಾಜರಿಗೆ ಗುರುವಾಗಿದ್ದ ವಿದ್ಯಾರಣ್ಯರು ಗುರುವಾಗಿದ್ದುದರಿಂದ ವಿದ್ಯಾರಣ್ಯರು ಶೃಂಗೇರಿ ಜಗದ್ಗುರುಗಳ ಶಿಷ್ಯರಾದುದರಿಂದ, ವಿಜಯ ನಗರದ ಅರಸರೂ ಶೃಂಗೇರಿ ಜಗದ್ಗುರುಗಳ ಶಿಷ್ಯರಾದುದರಿಂದ ಅವರ ಪ್ರಜೆಗಳಾದ ಗೌಡರೂ ಶ್ರೀ ಶೃಂಗೇರಿ ಜಗದ್ಗುರುಗಳ ಶಿಷ್ಯರಾಗಲು ಕಾರಣವಾಯಿತೆಂದು ಹೇಳಬಹುದು. ತಾಳಿಕೋಟೆ ಯುದ್ಧದ ನಂತರ ಈ "ಗೌಡರು" ಅವರಿದ್ದ ಸ್ಥಳದಲ್ಲಿಯೇ ಮುಂದುವರಿದರೆ ಮುಸಲ್ಮಾನರ ಬಲತ್ಕಾರಕ್ಕೆ ಕಟ್ಟು ಬಿದ್ದು ತಾವು ಸಹ ಮತಾಂತರ ಗೊಳ್ಳಬಹುದೆಂಬ ಭಯದಿಂದ ತಾವು ತಮ್ಮ ಸಂಸ್ಕೃತಿಯನ್ನು, ಧರ್ಮವನ್ನು ಕಾಪಾಡುವುದಕ್ಕೆ ಬೇರೆ ಕಡೆ ವಲಸೆ ಹೋಗಬೇಕೆಂದು ವಿಜಯನಗರದ ರಾಜರನ್ನು ಕೇಳಿಕೊಂಡಾಗ ಆಗಿನ ಕಾಲಕ್ಕೆ ಇಕ್ಕೇರಿ ನಾಯಕರು ವಿಜಯನಗರದ ರಾಜರ ಮಾಂಡಳಿಕರೂ ಹಾಗೂ ಆಪ್ತ ಸ್ನೇಹಿತರೂ ಆದುದರಿಂದ ಇಕ್ಕೇರಿಗೆ ಹೋಗಿ ನೆಲೆಸಿರೆಂದು ಹೇಳಿದ ಪ್ರಕಾರ ಅವರು ಇದ್ದ ಸ್ಥಳವನ್ನು ಬಿಟ್ಟು ಇಕ್ಕೇರಿಗೆ ವಲಸೆ ಬಂದರೆಂದೂ, ಅಲ್ಲಿ ಆಗಿನ ಕಾಲದಲ್ಲಿ ಲಿಂಗಾಯಿತರ ಪ್ರಭಾವ ಇದ್ದು ಅವರು ಈ "ಗೌಡ"ರನ್ನು ಲಿಂಗಾಯಿತರಾಗಬೇಕೆಂದು ಒತ್ತಾಯಿಸಿದುದರಿಂದ ಅಲ್ಲಿಂದಲೂ ದಕ್ಷಿಣಕ್ಕೆ ಸರಿದು, ಐಗೂರು ಸೀಮೆಗೆ ಬಂದು ನೆಲೆಸಿದರೆಂದೂ, ಅಲ್ಲಿಯೂ ಅವರಿಗೆ ಸರಿತೋರದೆ ಇಕ್ಕೇರಿ ನಾಯಕರ ಅಧೀನದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲಸುವಂತೆ ಮಾಡಿದರೆಂದೂ, ನಂತರ ದಕ್ಷಿಣ ಕನ್ನಡ ಜಿಲ್ಲೆ ಕೊಡಗು ರಾಜರ ಸ್ವಾಧೀನಕ್ಕೆ ಬಂತೆಂದೂ 1779ರಲ್ಲಿ ದೊಡ್ಡ ವೀರರಾಜರು ಈ "ಗೌಡರಲ್ಲಿ ಪ್ರತಿ ಗ್ರಾಮದಿಂದ 15ಜನರನ್ನು ಕೊಡಗಿಗೆ ಕರೆದುಕೊಂಡು ಬಂದು ನೆಲಸುವಂತೆ ಆಯಿತೆಂದು ಚರಿತ್ರೆ ಇದೆ. ಈ ಮೇಲಿನ ಚರಿತ್ರೆಯ ಹಿನ್ನಲೆಯಿಂದ ಗೌಡರು ಶ್ರೀ ಶೃಂಗೇರಿ ಜಗದ್ಗುರುಗಳ ಸಂಪರ್ಕ. ಶೃಂಗೇರಿ ಜಗದ್ಗುರುಗಳಿಗೆ ಗೌಡರ ಮದುವೆಯಲ್ಲಿ ಹರಿಕೆ ಹಣ ಕಟ್ಟುವಾಗ ಗುರುಕಾಣಿಕೆ ಈಗಲೂ ಕೊಡುತ್ತಿದ್ದು ಅದು ಹಾಗೆಯೇ ಮುಂದುವರಿಯುತ್ತಿದೆ. ಆದರೆ ಹತ್ತಿಪ್ಪತ್ತು ವರ್ಷಗಳಿಂದ ಆದಿ ಚುಂಚನಗಿರಿ ಮಠದ ಸಂಪರ್ಕ ಬೆಳೆಸಿಕೊಂಡು ಬರುತ್ತಿದ್ದಾರೆ. ಆದಿ ಚುಂಚನಗಿರಿಯ ಪೀಠವು ಶೈವ ಆರಾಧನೆಯ ಗುರುಪೀಠವಾಗಿದೆ. ಅಲ್ಲಿನ ಆರಾಧ್ಯದೇವತೆ ಶ್ರೀ ಗಂಗಾಧರೇಶ್ವರರಾಗಿದ್ದಾರೆ. ವಿಜಯನಗರದ ರಾಜರ ಮನೆ ದೇವತೆ ತಿರುಪತಿ ಶ್ರೀ ವೆಂಕಟೇಶನಾದುದರಿಂದ ಅವರ ಪ್ರಜೆಗಳಾದ ಈ ಮೇಲ್ಕಾಣಿಸಿದ "ಗೌಡರೂ" ಶ್ರೀ ವೆಂಕಟೇಶ್ವರನಾದ ಒಕ್ಕಲಿಗ ಜಗದ್ಗುರುವೂ ಸಹ ಬಹಳ ಹಿಂದೆ ಶ್ರೀ ಶೃಂಗೇರಿಯ ಜಗದ್ಗುರುಗಳಾಗಿದ್ದರು. ನಂತರ ತಮ್ಮವರೇ ಜಗದ್ಗುರುಗಳಾಗಬೇಕೆಂದು ಮಠವನ್ನು ಸ್ಥಾಪಿಸಿದರು. ಈ ಮೇಲಿನ ಹಿನ್ನಲೆಯಲ್ಲಿ ಗೌಡರು ಗುರುವನ್ನು ಅನುಸರಿಸುವುದು ಒಳ್ಳೆಯದೆಂದು ಸಂಗಾತಿಯ ಸಂಪಾದಕೀಯ ಎಲ್ಲಾ ಗೌಡರೂ ಒಬ್ಬರೇ ಗುರುವನ್ನು ಅನುಸರಿಸುವುದು ಒಳ್ಳೆಯದೆಂದು ಸಂಗಾತಿಯ ಅಭಿಪ್ರಾಯ. ಅದಲ್ಲದೆ ಕೆಲವರು ಶ್ರೀ ಶೃಂಗೇರಿಯ ಶ್ರೀ ಶಂಕರ ಚಾರ್ಯರು ನಮ್ಮ ಗುರುವೆಂದು ಇನ್ನು ಕೆಲವರು ಶ್ರೀ ಆದಿಚುಂಚನ ಗಿರಿಯ ಮಠಾಧೀಶ್ವರರು ನಮ್ಮ ಗುರುವೆಂದು ಅನುಸರಿಸಿದರೆ "ಗೌಡ"ರಲ್ಲಿ ಇಬ್ಬಗೆಯ ಅನುಷ್ಠಾನ ಸಲ್ಲದೆಂದು ಸಂಗಾತಿಯ ಅಭಿಪ್ರಾಯ.

### ಶುಭ ಹಾರೈಕೆ

ಸಂಗಾತಿ ಪತ್ರಿಕೆಯಲ್ಲಿ ಗೌಡರ ಸಮಸ್ಯೆಗಳು, ಗೌಡರ ಕಾರ್ಯಕಲಾಪದ ಬಗ್ಗೆ, ಗೌಡರ ಚರಿತ್ರೆ, ಗೌಡರ ಸಂಸ್ಕೃತಿ, ಗೌಡ ವ್ಯಕ್ತಿಗಳ ಪರಿಚಯ, ಸಮಾಜದಲ್ಲಿನ ಕುಂದು ಕೊರತೆಗಳು ಹೆಚ್ಚಾಗಿ ಮೂಡಿಬರಲಿ.

ಪ್ರೊ. ಪೂಜಾರಿ ಮೊಣ್ಣಪ್ಪ, ಬೆಂಗಳೂರು

# ಗೌಡ ಸಂಸ್ಕೃತಿ :

(ಹಿಂದಿನ ಸಂಚಿಕೆಯಿಂದ....

**ಶುದ್ಧ :** ಇದು ಮೃತನ 5ನೇ ದಿನದಿಂದ ಹಿಡಿದು 11ನೇ ದಿನದವರೆಗೂ ಮಾಡುವರು. ಈ ದಿನವೇ. ಮೊದಲು ದೂಪೆಯ ಅಲಂಕಾರವಾಗುತ್ತಿದ್ದಂತೆ ಮನೆಗೆ ಕ್ಷೌರಿಕ, ಮಡಿವಾಳ ಬಂದಿರುತ್ತಾರೆ. ಊರಿನವರು ಪುಣ್ಯಾರ್ಚನೆ ತಂದಿರುತ್ತಾರೆ. ಕ್ಷೌರಿಕನು ಕುಟುಂಬದವರ ಮತ್ತು ಇಷ್ಟಪಟ್ಟ ಬಂಧುಗಳ ತಲೆಕೂದಲು, ಗಡ್ಡ, ಮೀಸೆ ಇತ್ಯಾದಿ ತೆಗೆಯುತ್ತಿರುತ್ತಾನೆ. ಕಿರಿಯರು ಮೃತರಾದರೆ ಹಿರಿಯವರು ಮೀಸೆ, ಗಡ್ಡ, ತಲೆಕೂದಲನ್ನು ಬೋಳಿಸಬಾರದೆಂದು ಹಿಂದಿನಿಂದ ನಡೆದುಬಂದ ಪದ್ಧತಿ.

ಕುಂಟಿಗೆ ನಿಂತವನನ್ನು ಮನೆಯ ಮೆಟ್ಟಲಿನಲ್ಲಿ ಮೊಣಕಾಲು ಊರಿ ಕುಳ್ಳಿರಿಸಿ ಒಂದು ತೆಂಗಿನ ಕಾಯಿಯನ್ನು ಒಡೆದು ಅದರ ನೀರನ್ನು ಗಡ್ಡ ತಲೆಗೆ ಹಾಕಿ ಒದ್ದೆ ಮಾಡಿ ಗಡ್ಡ ತಲೆ ಕೂದಲನ್ನು ಬೋಳಿಸತಕ್ಕದ್ದು. ನಂತರ ಕುಂಟಿಗೆಯವನನ್ನು ಮನೆಯ ಸೂರಿನಲ್ಲಿ ತಲೆಬಾಗಿ ನಿಲ್ಲುವಂತೆ ಮಾಡಿ ಒಂದು ಚೆಂಬು ನೀರು, ಒಂದು ಚಿಕ್ಕ ಕುಕ್ಕೆಯಲ್ಲಿ ಅಕ್ಕಿ ತಂದು ನೀರನ್ನು ಅವನ ತಲೆಗೆ ಹುಯ್ದು ಆ ನೀರು ಬೀಳುವಲ್ಲಿ ಅಕ್ಕಿ ಕುಕ್ಕೆಯನ್ನು ಹಿಡಿದು ಅಕ್ಕಿಯನ್ನು ಒದ್ದೆ ಮಾಡಬೇಕು. ಹೀಗೆ ಒದ್ದೆ ಮಾಡಿದ ಅಕ್ಕಿಯನ್ನು ಒಂದು ಕಂಚಿನ ಬಟ್ಟಲಿಗೆ ಹಾಕಬೇಕು. ಅನಂತರ ಶವ ಮಲಗಿಸಿದ ಸ್ಥಳದಲ್ಲಿ ಒಂದು ಮಣೆಯನ್ನು ಇಟ್ಟು ಅದರ ಮೇಲೆ ಮಡಿ ಬಟ್ಟೆಯನ್ನು ಹಾಸಿ ಈ ಕಂಚಿನ ಬಟ್ಟಲನ್ನು ಬಟ್ಟೆಯ ಮೇಲೆ ಇಡಬೇಕು. ಆ ಬಟ್ಟಲಿಗೆ ದೀಪದ ಬತ್ತಿ, ಗಂಧದ ಕಡ್ಡಿಯ ಕಟ್ಟು, ಒಂದು ಬಾಳೆಲೆಯಲ್ಲಿ ಅರಸಿಣದ ಹುಡಿ (ಬಾಳೆ ಎಲೆಯನ್ನು ಮಗುಚಿ ಹಿಂಭಾಗದಲ್ಲಿ ಕಟ್ಟಬೇಕು. ಏಕೆಂದರೆ ಅದು ಅಶುಭ ಕಾರ್ಯವಾದರಿಂದ) ಯನ್ನು ಕಟ್ಟಿಡಬೇಕು. ಅಲ್ಲದೆ ಮೃತನು ಸತ್ತ ದಿವಸ ಆತನಿಗೆ ಒಡೆದ ತೆಂಗಿನಕಾಯಿಯ ಒಂದು ಭಾಗವನ್ನು ಊರು ಕುಂಟಿಗೆಯವನ ಹಸ್ತ ಕೊಟ್ಟು ಅದನ್ನು ಆತ ತೆಗೆದಿಡುವ ಕ್ರಮವಿದೆ. ಆ ತೆಂಗಿನ ಕಾಯಿಯನ್ನು ಚಿಕ್ಕ ಚಿಕ್ಕ ಹೋಳುಗಳನ್ನಾಗಿ ಮಾಡಿ ಅದನ್ನು ಒಂದು ಬಾಳೆ ಎಲೆಯಲ್ಲಿ ಕಟ್ಟಬೇಕು. ಎಲ್ಲಾ ಸಾಮಾನುಗಳನ್ನು ಅಕ್ಕಿ ತುಂಬಿದ ಬಟ್ಟಲಿನಲ್ಲಿಟ್ಟು ಹಾಸಿದ ಬಟ್ಟೆಯಿಂದ ಬಟ್ಟಲನ್ನು ಕಟ್ಟತಕ್ಕದ್ದು. ತದನಂತರ ಕುಂಟಿಗೆದಾರನು ಮನೆಯವರು ಆಗೂ ಊರು ಕುಂಟಿಗೆದಾರನು ಸೇರಿ, ಆ ಬಟ್ಟಲಿಗೆ 3 ಸುತ್ತು ಅಪ್ರದಕ್ಷಿಣೆ ಬರತಕ್ಕದ್ದು. ಸುತ್ತು ಬಂದನಂತರ ಊರು ಕುಂಟಿಗೆಯವನು ಆ ಬಟ್ಟಲನ್ನು ಮನೆಯ ಕುಂಟಿಗೆಯುವನ ಎಡದ ಭುಜದ ಮೇಲಿಡತಕ್ಕದ್ದು. ಅಕ್ಕಿ ಬಟ್ಟಲನ್ನು ಹೊತ್ತ ಕುಂಟಿಗೆದಾರ ಮನೆಯವರು ನೆರದಿರತಕ್ಕ ಗಂಡಸರು, ಹೆಂಗಸರು ಮಕ್ಕಳು ಎಲ್ಲರೂ ದೂಪೆಯ ಹತ್ತಿರ ಹೋಗುವರು. ಹೋಗುವಾಗ ಮನೆಯಲ್ಲಿ ಮಾಡಿದ ಅಡಿಗೆ, ತಿಂಡಿ, ಮಧ್ಯ ಇತ್ಯಾದಿ ಎಲ್ಲಾ ತಿಂಡಿ ತಿನಿಸುಗಳನ್ನು ಅಲ್ಪ ಸ್ವಲ್ಪ ತೆಗೆದುಕೊಂಡು ಹೋಗುತ್ತಾರೆ. ಕುಂಟಿಗೆಯವನು ಹೊತ್ತ ಬಟ್ಟಲನ್ನು ದೂಪೆಯ ಮೇಲಿಟ್ಟು, ಶವಸಂಸ್ಕಾರದಂದು ಇಟ್ಟುಕೊಂಡಿದ್ದ ಬಟ್ಟೆಯ ತುಂಡನ್ನು ದೂಪೆಯ ಮೆಟ್ಟಲಿನ ಸಮೀಪ ಹಾಸಿ ಅದರ ಮೇಲೆ ಮೊಣಕಾಲೂರಿ ಕುಳಿತುಕೊಳ್ಳಬೇಕು. ಬಟ್ಟಲಿನ ಬಟ್ಟೆ ಗಂಟನ್ನು ಬಿಚ್ಚಿ ದೂಪೆಯ ಮೇಲೆ ಬಾಳೆ ಎಲೆಯನ್ನು ಇ ಅದರ ಮೇಲೆ ಬಟ್ಟಲಿನಲ್ಲಿದ್ದ ಅರ್ಧದಷ್ಟು ಅಕ್ಕಿಯನ್ನು ಇ ಅರಸಿಣ ಹುಡಿ ಸುಣ್ಣ ಇತ್ಯಾದಿಗಳನ್ನು ಮಿಶ್ರ ಮಾಡಬೇಕು. ಉ ಅಕ್ಕಿಯನ್ನು ಹಾಗೆಯೇ ಇಡತಕ್ಕದ್ದು. ಮಿಶ್ರಣದ ಅಕ್ಕಿಯ ದೂಪೆಯ ಮೇಲೆ ಹಾಕಿದ ನಂತರ ದೀಪಧೂಪಾದಿಗಳು, ಎಳನೀ ಮನೆಯಿಂದ ತಂದ ಎಲ್ಲಾ ತಿಂಡಿ ಪದಾರ್ಥಗಳನ್ನು ದೂಪೆಯ ಸುತ್ತ ಇಡುವರು. ಅನಂತರ ಮನೆಯ ಕುಂಟಿಗೆದಾರನ ಎಡಭುಜದ ಮೆ ಅರಸಿಣ ಮಿಶ್ರಣದ ಬಟ್ಟಲನ್ನು ಇಟ್ಟು ಕುಟುಂಬಸ್ಥರೆಲ್ಲ ಎಡಗೈಯಲ್ಲಿ ಚೆಲ್ಲುತ್ತಾ "ನಾರಾಯಣ ನಾರಾಯಣ" ಎಂ ಹೇಳುತ್ತಾ ದೂಪೆಗೆ ಮೂರು ಸುತ್ತು ಅಪ್ರದಕ್ಷಿಣೆ ಬರುವ ಉಳಿದವರು ಊರು ನೆರೆಕರೆಯವರು ನೆಂಟರು ಬಿಳಿ ಅಕ್ಕಿಯನ್ನು ಹ ಶರಣು ಮಾಡುವರು.

ಕುಂಟಿಗೆದಾರನು ಕಂಚಿನ ಬಟ್ಟಲನ್ನು ದೂಪೆಯ ಕೆಳಭಾ ಮೆಟ್ಟಲು ಎದುರಿನಲ್ಲಿ ಮಗುಚಿ ಇಟ್ಟು ಅದರ ಎದುರಿನ ಕುಂಟಿನವಸ್ತ್ರ ಕೆಳಗೆ ಹಾಸಿ ಅದರ ಮೇಲೆ ಮೊಣಕಾಲೂರಿ ಕುಳಿ ಎರಡುಕೈಗಳನ್ನು ತಲೆಯ ಹಿಂಬದಿಗೆ ಕಟ್ಟಿ ಹಿಡಿದು ಮೂರು ಬ "ಸ್ವರ್ಗಕ್ಕೇ ಹೋಗು" ಎಂದು ತಲೆಯನ್ನು ಬಗ್ಗಿಸಿ ಕಂಚಿನ ಬಟ್ಟ ಮುಟ್ಟಿಸಿ ನಮಸ್ಕರಿಸಬೇಕು. ಮೃತರ ಎಲ್ಲಾ ಗಂಡುಮಕ್ಕಳು ರೀತಿಯಾಗಿ ಶರಣು ಮಾಡಬೇಕು. – ಮುಂದುವರೆಯುತ್ತ

---

**ಅರ್ಜಿ ಆಹ್ವಾನ**

ನೀನಾಸಮ್ ರಂಗಶಿಕ್ಷಣ ಕೇಂದ್ರ, 1999-2000ನೇ ಸಾಲಿನ ಪ್ರಶಿಕ್ಷಣಕ್ಕೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ಪ್ರವೇಶಕ್ಕೆ ಕನಿಷ್ಠ ವಿದ್ಯಾರ್ಹತೆ ಎಸ್‌ಎಸ್‌ಎಲ್‌ಸಿ ಉತ್ತೀರ್ಣ ರಾಗಿರಬೇಕು. ರಂಗಭೂಮಿಯಲ್ಲಿ ಆಸಕ್ತಿಯಿದ್ದು, ಸ್ವಲ್ಪಮಟ್ಟಿನ ಅನುಭವ ಇರುವಂತಹವರು ಅರ್ಜಿ ಸಲ್ಲಿಸಬಹುದು. ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಊಟ, ವಸತಿ ವ್ಯವಸ್ಥೆ ಇದೆ. ಎಲ್ಲರಿಗೂ ವಿದ್ಯಾರ್ಥಿವೇತನ ದೊರೆಯುತ್ತದೆ.

ರಂಗಕಲ್ಪನೆ, ರಂಗ ಇತಿಹಾಸ, ನಾಟಕ ಇತಿಹಾಸ ಇತ್ಯಾದಿ ಕ್ಷೇತ್ರಗಳಲ್ಲಿ ತರಬೇತಿ ನೀಡಲಾಗುವುದು.

ಅರ್ಜಿಗಳನ್ನು ರೂ. 20 ಕಳಿಸಿ ಪಡೆಯಬಹುದು. ಭರ್ತಿ ಮಾಡಿದ ಅರ್ಜಿಗಳನ್ನು ಜೂನ್ 26ರ ಒಳಗೆ ನೀನಾಸಮ್ ರಂಗ ಶಿಕ್ಷಣ ಕೇಂದ್ರ, ಹೆಗ್ಗೋಡು, ಸಾಗರ, ಶಿವಮೊಗ್ಗ-17 ಇಲ್ಲಿಗೆ ಕಳಿಸಬೇಕು.

ಜುಲೈ 4ರಂದು ಬೆಳಿಗ್ಗೆ 9ಕ್ಕೆ ಅಭ್ಯರ್ಥಿಗಳು ತಮ್ಮ ವೆಚ್ಚದಲ್ಲೇ ಆಯ್ಕೆಯ ಸಂದರ್ಶನಕ್ಕಾಗಿ ಹೆಗ್ಗೋಡಿಗೆ ಬಂದು ಹಾಜರಾಗಬೇಕು. ಸಂದರ್ಶನಕ್ಕೆ ಪ್ರತ್ಯೇಕ ಕರೆಯೋಲೆ ಕಳಿಸುವುದಿಲ್ಲ ಎಂದು ಪ್ರಕಟಣೆ ತಿಳಿಸಿದೆ.

# 1960ರ ದಶಕದಲ್ಲಿ ಮೈಸೂರಿನಲ್ಲಿ ಕೊಡಗು ಗೌಡರ ಸಂಘಟನೆಗೆ ಕಾರಣ ಕರ್ತರಾಗಿ ನಂತರ ಅಧ್ಯಕ್ಷರಾದ ಶ್ರೀ ಬೈಲೋಳಿರ ಕಾರ್ಯಪ್ಪನವರು



ಓದಿ ಏನಾಗಬೇಕು ಸುಬೇದಾರನಾಗಬೇಕೆ? ಕಲಿಕೆಯ ಬಗ್ಗೆ ರಿಯರ ತಾತ್ಸಾರ. ಹಿಂದೆ ವ್ಯವಸಾಯ ಪ್ರಧಾನವಾದ ಗೌಡ ಟುಂಬದ ಹಿರಿಯರು ಕಿರಿಯರನ್ನು ಓದಿನೆಡೆಗೆ, ಸೈನ್ಯದೆಡೆಗೆ ಬಿಡದೆ ಮ್ಮ ಮೂಲ ಕಸುಬನ್ನೇ ಅನುಸರಿಸಲಿ, ಮಗ ಕುಟುಂಬದಿಂದ ೂರವಾಗದೆ ಮನೆಯಲ್ಲಿಯೇ ಉಳಿದು ವಂಶ ವೃತ್ತಿಯನ್ನು ಕಲಿತು ುಂದುವರಿಯಲಿ ಎಂದು ಅಪೇಕ್ಷಿಸುತ್ತಿದ್ದರು. ಅವನಲ್ಲಿ ಅಡಗಿರುವ ಂತರಿಕ ಸಾಮರ್ಥ್ಯಕ್ಕೆ ಸರಿಯಾದ ಶಿಕ್ಷಣವನ್ನು ನೀಡದೆ ಏನೋ ಗಬಲ್ಲವನನ್ನು ಸಾಮಾನ್ಯ ನೇಗಿಲ ಯೋಗಿಯನ್ನಾಗಿ ಾಡುತ್ತಿರುವುದು ಸ್ವತಂತ್ರ ಪೂರ್ವದಲ್ಲಿ ನಮ್ಮ ಗೌಡ ಜನಾಂಗದಲ್ಲಿ ಮಾರು ಹೆಚ್ಚಿನ ಭಾಗ ಕಂಡುಬರುತ್ತದೆ. ಅಂತಹ ಒಂದು ಡರನ್ನು ನಿಭಾಯಿಸಿ ಸ್ವಇಚ್ಛೆಯಿಂದ ಮತ್ತು ಇರ್ರಿ ಮಂಜ್ಜ ಓದಲಿ ಂಬ ತಾಯಿಯ ಪ್ರೋತ್ಸಾಹದಿಂದ ಪದವಿಧರರಾಗಿ ಹಾಗೂ ಮಾಜಸೇವಕರಾಗಿ ಇಂದು ನಿವೃತ್ತಿ ಜೀವನವನ್ನು ನಡೆಸುತ್ತಿರುವ ್ರೀಯುತ ಬೈಲೋಳಿರ ಕಾರ್ಯಪ್ಪನವರನ್ನು ಸಂಗಾತಿ ಾತನಾಡಿಸಿದಾಗ.

ಪ್ರ. : ನಮಸ್ಕಾರ, ತಾವು ಮೈಸೂರಿನಲ್ಲಿ 1960ರ ದಶಕದಲ್ಲಿ ೌಡ ಸಮಾಜಕ್ಕಾಗಿ ಅಪಾರ ಸೇವೆಯನ್ನು ಸಲ್ಲಿಸಿದ್ದೀರಿ ಎಂದು ಳಿದು ಬಂತು. ಜನಾಂಗಕ್ಕಾಗಿ ತಮ್ಮ ಪರಿಚಯವನ್ನು ಮಾಡುವಿರಾ?

ಉ. : ನಾನು ಬೈಲೋಳಿರ ಮಾದಯ್ಯ ತಂಗಮ್ಮನವರಿಗೆ ್ರಥಮ ಪುತ್ರನಾಗಿ 1921 ಆಗಸ್ಟ್ 15ರಂದು ಜನಿಸಿದೆ. ಪ್ರಾಥಮಿಕ ಕ್ಷಣವನ್ನು ಮೂರ್ನಾಡಿನ ಶಾಲೆಯಲ್ಲಿಯೂ, ಮಾಧ್ಯಮಿಕ ಕ್ಷಣವನ್ನು 1938ರಿಂದ 1941 ತನಕ ಸೆಂಟ್ರಲ್ ಹೈಸ್ಕೂಲ್ ಮಡಿಕೇರಿಯಲ್ಲಿಯೂ ಮಾಡಿದೆ. ಉನ್ನತ ಶಿಕ್ಷಣವನ್ನು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಮಾಡಿ 1946ರಲ್ಲಿ ಪದವಿಧರನಾದೆ. ನನ್ನ ದ್ಯಾಭ್ಯಾಸಕ್ಕೆ ತಾಯಿ ಕೂಡಿಟ್ಟ ಹಣವನ್ನು ನೀಡುತ್ತಿದ್ದರು. ಅದೇ ವೇಳೆಯಲ್ಲಿ ಕೆದಂಬಾಡಿ ಪಿ. ಮುದ್ದಪ್ಪನವರು ನನಗೆ ತುಂಬಾ ಪ್ರೋತ್ಸಾಹವನ್ನು ನೀಡಿದರು.

ಪ್ರ. : ಕಲಿಕೆಯ ವೇಳೆಯಲ್ಲಿ ತಮ್ಮ ಹವ್ಯಾಸ ಏನಾಗಿತ್ತು?

ಉ. : ನನಗೆ ಹಾಕಿಯಲ್ಲಿ ತುಂಬಾ ಆಸಕ್ತಿ. 1945ರಲ್ಲಿ 'ಎ' ಟೀಮಿನಲ್ಲಿ ಆಡಿದೆ. ಕನ್ನಡದಲ್ಲಿ ತುಂಬಾ ಅಭಿರುಚಿಯಿತ್ತು. ಓದಿನ ಕಡೆ ಹೆಚ್ಚು ಗಮನ ಕೊಡುತ್ತಿದ್ದೆ.

ಪ್ರ. : ತಮ್ಮನ್ನು ಉದ್ಯೋಗದಲ್ಲಿ ತೊಡಗಿಸಿದರ ಬಗ್ಗೆ ಸ್ವಲ್ಪ ಹೇಳುವಿರಾ?

ಉ. : ಪದವಿ ಮುಗಿದೊಡನೆ 1946ರಲ್ಲಿ ರೈಲ್ವೆ ಡಿಪಾರ್ಟ್‌ಮೆಂಟ್‌ನಲ್ಲಿ ಅಕೌಂಟೆಂಟ್ ಆಗಿ ಸೇರಿಕೊಂಡೆ. ಮೈಸೂರಿಲ್ಲೆ ನಾನು ನನ್ನ ಕೊನೆಯ ನಿವೃತ್ತಿಯ ತನಕ ಇದ್ದೆ.

ಪ್ರ. : ತಮ್ಮ ಕೌಟುಂಬಿಕ ಜೀವನದ ಬಗ್ಗೆ ಪರಿಚಯಿಸುವಿರಾ?

ಉ. : 1951ರಲ್ಲಿ ಗುಡ್ಡಂಡ್ರ ಮುತ್ತಮ್ಮನವರನ್ನು ಮದುವೆಯಾದೆ. ನನಗೆ ಮೂರು ಜನ ಗಂಡು ಮಕ್ಕಳು. ಮೂರು ಜನ ಹೆಣ್ಣು ಮಕ್ಕಳು. ಎಲ್ಲರೂ ವಿದ್ಯಾವಂತರು. ಪ್ರಥಮ ಪುತ್ರಿ ಪ್ರೇಮಾವತಿ ಡಾಕ್ಟರ್, ಆಕೆಯ ಗಂಡ ಕೂಡ ಡಾಕ್ಟರ್. ಎರಡನೆಯವಳು ಮೀನಾಕ್ಷಿ ಎಂ. ಎ. ಆಗಿದ್ದಾಳೆ, ಕೆ. ಇ. ಬಿಯಲ್ಲಿ ಕೆಲಸದಲ್ಲಿದ್ದಾಳೆ, ಆಕೆಯ ಗಂಡ ತಹಶೀಲ್ದಾರರು. ಮೂರನೆಯವಳು ಗೀತ ಕೆ. ಇ. ಬಿಯಲ್ಲಿದ್ದಾಳೆ. ಒಬ್ಬ ಮಗ ಹೆಚ್. ಎ. ಎಲ್ ಬೆಂಗಳೂರಿನಲ್ಲಿ ಇದ್ದಾನೆ.

ಪ್ರ. : ತಾವು ಮೈಸೂರಿನಲ್ಲಿ ಮಾಡಿದ ಸಮಾಜಸೇವೆಯ ಬಗ್ಗೆ ಸ್ವಲ್ಪ ತಿಳಿಸುವಿರಾ?

ಉ. : ನಾನು ಮೈಸೂರಿನಲ್ಲಿ ಸೆಟ್ಲ್ ಆದೆ. ಆಗ ಅಲ್ಲಿ ಗೌಡ ಜನಾಂಗದವರು ಬಹಳ ಕಡಿಮೆ ಇದ್ದರು. 1959ರಲ್ಲಿ ಕುಂಞ್ಞಲಿ ಮಾದಪ್ಪನವರು ಮೈಸೂರಿನಲ್ಲಿ ಕೈಲ್‌ಮೂಹರ್ತ ಮಾಡುವ ಎಂದು ಮುಂದೆ ಬಂದರು. ಹೀಗೆ ಅದೇ ವರ್ಷ ಕೈಲ್ ಮೂಹರ್ತ ಹಬ್ಬ ಮಾಡಿದೆವು. ಆ ಒಂದು ಹಬ್ಬದೂಟದ ಸಂದರ್ಭದಲ್ಲಿ ನಾವು ಮೂವರು, ನಾನು, ಮಂದ್ರಿರ ಕಾರ್ಯಪ್ಪ, ಪೊನ್ನಚ್ಚನ ಚಂಗಪ್ಪ ಮಾತಾಡುತ್ತಾ ನಾವೊಂದು ಸಂಘಟನೆ ಮಾಡಬಾರದೇಕೆ? ಎಂದು ಸಮಾಲೋಚಿಸಿದೆವು. ಹೀಗೆ ಮುಂದೆ ಅದರ ಜವಬ್ದಾರಿಯನ್ನು ನಾನೇ ವಹಿಸಿಕೊಂಡು 1960 ಅಕ್ಟೋಬರ್ 20ರಂದು ಮೀಟಿಂಗ್ ಕರೆದೆವು. ಮೀಟಿಂಗ್‌ಗೆ ದಾಸ್‌ಪ್ರಕಾಶ್ ಕಟ್ಟಡದ ಹಾಲನ್ನು ಪಡೆದು ಕೋರನ ದೇವಯ್ಯ ಇವರನ್ನು ಅಧ್ಯಕ್ಷರನ್ನಾಗಿ ಕರೆದೆವು. ಅವರ ಗೈರು ಹಾಜರಿಯಿಂದ ದಂಬೆಕೋಡಿ ಚಿನ್ನಪ್ಪ (ಎಲ್‌ಎಲ್. ಬಿ. ಮಾಡುತ್ತಿದ್ದರು) ರವರನ್ನು ಅಧ್ಯಕ್ಷರನ್ನಾಗಿ ಮಾಡಿದೆವು. ಅಂದಿನ ಸಭೆಯಲ್ಲಿ 60 ಮಂದಿ ಇದ್ದರು. ಅಂದು ಕೊಡಗು ಗೌಡ ಅಸೋಸಿಯೇಷನ್ ಸ್ಥಾಪನೆ ಮಾಡಿದೆವು.

ಹೀಗೆ 3-4ಬಾರಿ ನಾವು ಮೀಟಿಂಗನ್ನು ನನ್ನ ಮನೆಯಲ್ಲೇ ಕರೆದು ಅಸೋಸಿಯೇಷನ್ ಬಗ್ಗೆ ಮಾತನಾಡುತ್ತಾ ಇದ್ದೆವು. ಅದರ ಅಧ್ಯಕ್ಷರು ದಂಬೆಕೋಡಿ ಚಿಣ್ಣಪ್ಪನವರೇ ಆಗಿದ್ದರು. ಈ ವೇಳೆ ನಾನೇ ಸ್ವತಹ ಸೈಕಲ್ ತುಳಿದುಕೊಂಡು 10-15ಬಾರಿ ಮನೆ ಮನೆ ಅಲೆದು ಸಂಘಟನೆ ಮಾಡಿದೆವು. ಈ ವೇಳೆ ಗೌಡ ಅಸೋಸಿಯೇಷನ್ ಸರಿ ಇಲ್ಲ ಗೌಡ ಎಜುಕೇಷನ್ ಫಂಡ್ ಮಾಡುವ ಎಂದಾಯಿತು.

1968ರಲ್ಲಿ ಮತ್ತೆ ಮೀಟಿಂಗ್ ಕರೆದು ಗೌಡ ಎಜುಕೇಷನ್ ಫಂಡ್ ಎಂದು ರೆಕಾರ್ಡ್ ಮಾಡಿದೆವು. ಹಾಗೆ ಒಂದು ಹಾಸ್ಟೆಲ್ ಬಾಡಿಗೆಗೆ ಗೊತ್ತು ಮಾಡಿ ಹಂಗಾಮಿ ವಿದ್ಯಾರ್ಥಿ ನಿಲಯ ಪ್ರಾರಂಭಿಸಿದೆವು.

ಆ ನಂತರ ಎಲ್ಲರೂ ಸಮಾಲೋಚಿಸಿ ನಮ್ಮದೇ ಆದ ಒಂದು ಸ್ಥಳ ಬೇಕೆಂದು ನಾನು ಕೆಲಸಕ್ಕೆ ಒಂದು ತಿಂಗಳು ರಜೆ ಪಡೆದು ಮನೆ ಮನೆ ಸುತ್ತಿ 4,000 ರೂ. ಸಂಗ್ರಹಿಸಿದೆ. ಈ ವೇಳೆ ಒಂದು ರೂಪಾಯಿ ವಸೂಲಾತಿಯೂ ಇದೆ. ಈ ವೇಳೆ ಕೋರನ ದೇವಯ್ಯನವರು 10,000 ಡೊನೇಷನ್ ಕಲೆಕ್ಟ್ ಮಾಡಿ ನೀಡಿದರು. ಒಂದು ವರ್ಷದ ಶ್ರಮದ ತರುವಾಯ ಜಯಲಕ್ಷ್ಮೀಪುರದಲ್ಲಿ 13,666ರೂ. ನೀಡಿ 220×120 ವಿಸ್ತೀರ್ಣದ ಜಾಗ ಪಡೆದೆವು. ಈ ವೇಳೆ ಕುರುಂಜಿ ವೆಂಕಟರಮಣ ಗೌಡರು ತುಂಬಾ ಪ್ರೋತ್ಸಾಹವನ್ನು ನೀಡಿದರು. ಲಾಟರಿ ಪದ್ಧತಿಯಿಂದ 11,000 ಸಂಪಾದಿಸಿ, 14,000ರೂ. ವೆಚ್ಚದಲ್ಲಿ ಫೌಂಡೇಷನ್ ಹಾಕಿದೆವು. ಫೌಂಡೇಷನ್ ಆದನಂತರ ಫೌಂಡೇಷನ್ ಸರಿ ಇಲ್ಲವೆಂದು ಅದನ್ನು ಕಿತ್ತು ಹಾಕಿದರು. 14,000 ರೂ. ಸುಮ್ಮನೆ ವ್ಯಯವಾಯಿತು. ಅಷ್ಟರಲ್ಲಿ ನನಗೆ ನಿವೃತ್ತಿಯಾಗಿ ಊರಿಗೆ ಮರಳಿದೆ. ಮುಂದೆ ಮೈಸೂರಿನಲ್ಲಿ ಗೌಡ ಎಜುಕೇಷನ್ ಫಂಡ್‌ನ ಕಾರ್ಯ ಮುಂದುವರಿಯಿತು. ಈಗಲೂ ಕಾರ್ಯ ಮುಂದುವರಿದು ಬಂದರು ಸಹ ಹೇಳುವ ಪ್ರಗತಿ ಸಾಧಿಸಿಲ್ಲ.

ಪ್ರ. : ಸಂತೋಷ, ನಿಮ್ಮ ಹಿನ್ನೆಡೆಯದ ಗುರಿಯ ಸಾಧನೆ ಇಂದು ಮೈಸೂರಿನ ಜಯಲಕ್ಷ್ಮಿಪುರದಲ್ಲಿ ಗೌಡ ಎಜುಕೇಷನ್ ಫಂಡ್ ಈಗ ಗರಿಗೆದರಿ ನಿಂತಿದೆ. ಬಹಳಷ್ಟು ವಿದ್ಯಾರ್ಥಿಗಳಿಗೆ ಅನುಕೂಲವಾಗಿದೆ. ನಿಮ್ಮ ಈ ಒಂದು ಸಾಧನೆಗೆ ಜನಾಂಗ ನೀಡಿದ ಪುರಸ್ಕಾರವೇನು?

ಉ. : ೧೯೯೭ರಲ್ಲಿ ನನ್ನನ್ನು ಮೈಸೂರಿಗೆ ಬರಮಾಡಿಕೊಂಡು ಸನ್ಮಾನ ಮಾಡಿ ಗೌರವಿಸಿದರು.

ಪ್ರ. : ಭಾಷೆ, ಸಂಸ್ಕೃತಿ ಹಾಗೂ ಗೌಡ ಜನಾಂಗಕ್ಕೆ ನಿಮ್ಮ ಕಿವಿ ಮಾತು?

ಉ. : ಮಳೆ ಬಂದರೆ ಊರಿಗೆ ಕೊಡೆ ಹಿಡಿಯಲಾಗದು. ಹಿಂದೆ ಗೌಡರು ಮುಗ್ಧ ಸ್ವಭಾವದವರು, ಅಂಜಿಕೆ ಉಳ್ಳವರಾಗಿದ್ದರು. ಅದುದರಿಂದ ನಮ್ಮ ಸಂಸ್ಕೃತಿ ನಿಧಾನವಾಗಿ ತೆವಳುತ್ತಾ ಮುಂದುವರಿಯಬೇಕಾಯಿತು. ಇತರ ಸಂಸ್ಕೃತಿಯೊಂದಿಗೆ ಪೈಪೋಟಿ ಮಾಡದೆ ಮಂದಗತಿಯಲ್ಲಿ ಸಾಗಿದೆ. ಈಗ ಸ್ವಲ್ಪ ಚೇತರಿಸಿಕೊಂಡಿದೆ. ಈಗಲೂ ಕೂಡ ಗೌಡ ಜನಾಂಗದವರಲ್ಲಿ ಭಯ, ಭೀತಿ, ಇತರರ ಮನೋಭಾವನೆ, ವಾತಾವರಣಕ್ಕೆ ಅನ್ವಯಿಸುವ ಮನೋವೃತ್ತಿ ಇರುವುದರಿಂದ ನಮ್ಮ ಭಾಷೆ ಮತ್ತು ಸಂಸ್ಕೃತಿ ಇನ್ನೂ ಇತರ ಸಂಸ್ಕೃತಿಗೆ ಸರಿಸಮಾನ ಎಂಬುದರ ಬಗ್ಗೆ ಧೃಡ ಸಂಕಲ್ಪವನ್ನು ಕೈಗೊಳ್ಳುವ ಮನೋಭಾವನೆ ನಮ್ಮ ಎಲ್ಲಾ ಜನಾಂಗದವರಿಗೆ ಬಾರದೆ ಇರುವುದರಿಂದ ಈಗಲೂ ಡೋಲಾಯಮಾನ ಪರಿಸ್ಥಿತಿಯಲ್ಲಿದೆ. ಭಾಷೆ ಮತ್ತು ಸಂಸ್ಕೃತಿಯ ಬಗ್ಗೆ ಎಲ್ಲರಿಗೂ ಅಭಿಮಾನ ಬರಲಿ. ಯುವಶಕ್ತಿ, ಹಣ, ಅಹಂಕಾರ ಇತರ ಸಮಾಜಘಾತುಕ ಚಟುವಟಿಕೆಯಿಂದ ಹೊರಬಂದು ಸಮಾಜ ಏಳಿಗೆಗಾಗಿ ತಮ್ಮನ್ನು ತೊಡಗಿಸಿಕೊಳ್ಳಲಿ, ಸ್ವಾವಲಂಬಿಗಳಾಗಲಿ ಎಂದು ಆಶಿಸುತ್ತೇನೆ.

ಪ್ರ. : ಕೊಡಗು ಸಂಗಾತಿ ಬಗ್ಗೆ ತಮ್ಮ ಸಲಹೆಯೇನಾದ ಇದೆಯೆ?

ನಿಜವಾಗಿಯು ಕೊಡಗು ಸಂಗಾತಿ ದಿಟ್ಟ ಹೆಜ್ಜೆಯಿಟ ಜನಾಂಗಕ್ಕಾಗಿ ತನ್ನನ್ನೇ ತಾನೆ ಅರ್ಪಿಸಿಕೊಂಡು, ಪ್ರಯತ್ನಪಟ ಸಂಘಟನೆಗಾಗಿ ಶ್ರಮಿಸುತ್ತಿದೆ. ಇವರ ಈ ಪ್ರಯತ್ನಕ್ಕೆ ನಾವೇ ಅಭಾರಿಗಳು. ಹೀಗೆಯೇ ಮುಂದುವರಿಯಲಿ. ನನ್ನ ಆಶೀರ್ವಾದ ಸ ಇದೆ.

ತಮ್ಮ ಪ್ರಯತ್ನ ಅನುಭವವನ್ನು ಬಿಚ್ಚು ಮನಸ್ಸಿನಿಂದ ಸಂಗ ಓದುಗರಿಗೆ ನೀಡಿದ್ದೀರಿ. ಕೊಡಗು ಸಂಗಾತಿಯ ಅಭಿವೃದ್ಧಿಗ 1,000 ರೂ. ಧನ ಸಹಾಯವನ್ನು ನೀಡಿದ್ದೀರಿ. ನಿಮಗೆ ಕುಲಗು ವೆಂಕಟರಮಣನು ದೀರ್ಘ ಆಯುರಾರೋಗ್ಯ ಕೊಟ್ಟು, ಕಾಪಾಡ ಎಂದು ಗೌಡ ಜನಾಂಗ ಹಾಗೂ ಕೊಡಗು ಸಂಗಾತಿಯ ಪರವ ಹಾರೈಸುತ್ತೇನೆ.

**ಲೇಖನ : ತೆಕ್ಕಡ ಬಿ. ಕುಮಾ**

**ಸಂದರ್ಶನ : ತೆಕ್ಕಡ ಕೆ. ರಮೇಶ್ ಮುತ್ತಾರ್ಮು**

---

## ಸಂಗಾತಿ-ಹೆಂಗಾಗ್‌ತಿ?

ಕೊಡಗು ಸಂಗಾತಿ,
ಓದಿದನು ಒಂದ್ ಸರ್ತಿ
ಓದದಲೆ ಹೆಂಗಾಗ್‌ತಿ,
ನೀನದರ ಸಂಗಾತಿ?

ಕೊಡಗು ಸಂಗಾತಿ,
ಬರಿ ಅದಕೆ ಒಂದ್ ಪಂಕ್ತಿ
ಬರಿಯದಲೆ ಹೆಂಗಾಗ್‌ತಿ,
ನೀನದರ ಸಂಗಾತಿ?

ಕೊಡಗು ಸಂಗಾತಿ
ಕೊಂಡೋದು ಪ್ರತಿ ಸರ್ತಿ
ಕೊಳ್ಳದಲೆ ಹೆಂಗಾಗ್‌ತಿ,
ನೀನದರ ಸಂಗಾತಿ?

ಕೊಡಗು ಸಂಗಾತಿ
ಓದದನು ಒಂದ್ ಸರ್ತಿ
ಬರಿ ಅದಕೆ ಒಂದ್ ಪಂ
ಕೊಂಡೋದು ಪ್ರತಿಸರ್ತಿ

**ಇಗ್ಗುಡ ಚೆಣ್ಣಪ್ಪ ಸುಬ್ರಮ**

ಪಾರಾಣೆ. (ವಕೀಲರು,ಮೈಸೂ

---

**ಗೌಡ ಮಹಿಳಾ ಒಕ್ಕೂಟ, ಮಡಿಕೇರಿ. (ಕೊ. ಸಂ. ಸಂಚಿಕೆ 10 ಪು 15) ದಿನಾಂಕ 11-5-1999ರಂದು ನಡೆದ ಕಾರ್ಯಕ್ರಮದಲ್ಲಿ ಬಿಟ್ಟು ಹೋದ ಅಂಶಗಳು.**

1. ಸಮಾರಂಭದ ಸಂಬಂಧ ನಡೆದ ಅದೃಷ್ಟ ಪರೀಕ್ಷೆ ಲಾಟರಿ ಮೊದಲ ಬಹುಮಾನವು 196, ದ್ವಿತೀಯ 177, ತೃತೀಯ ನಂಬರ್ ಎಂದು ಓದಿಕೊಳ್ಳುವುದು. ಹಿಂದೆ ತಿಳಿಸಿದಂತೆ 187 ಅ
2. ವಾರ್ಷಿಕೋತ್ಸವ ಸಹಕಾರಕ್ಕಾಗಿ, ನಂಗಾರ್ ಮಣಿ ಇವರನ್ನು ಸ ಸನ್ಮಾನಿಸಲಾಯಿತೆಂದು ಓದಿಕೊಳ್ಳುವುದು.
3. ಇದೇ ಸಂದರ್ಭದಲ್ಲಿ ಕೊಡಗುಸಂಗಾತಿಯ ಸಂಪಾದಕಿ ಪಟ್ಟ ಶೀಲಾಮಣಿಯವರು ರೂ. 1000/- ಅನ್ನು ಉದಾರವ ಮಹಿಳಾ ಒಕ್ಕೂಟಕ್ಕೆ ಅಂದು ನೀಡಿದ್ದರೆಂದು ಓದಿಕೊಳ್ಳುವು ಅನಿವಾರ್ಯವಾಗಿ ಬಿಟ್ಟು ಹೋಗಿದನ್ನು ಈಗ ಸೇರಿಸಲಾಗಿ

– ಸಂಪಾ

# ಕರಿಚಿನ್ನ -ಧಾರಾವಾಹಿ-27

ಮೂಲಕಥೆ : ಅಶ್ವಥಿ ಅರವಿಂದ್

[ಅರೆಭಾಷೆಗೆ] : ಎಂ. ಇ. ಮಹಮ್ಮದ್

ತನ್ನ ಅಣ್ಣ ಚಂಗುಮಣಿದ್ ಸ್ವರ ಕೇಳ್‌ದಂಗಾದ್ರಂದ ನೀಲು ಎದ್ದ್ ಹೋಗಿ ಬಾಗ್‌ಲ್ ತೆಗ್ದ್ತ್.

ಅಷ್ಟರಲಿ ಅವಳ ಮೈಮಾಲೆ ಟಾರ್ಚ್ ಬೆಳಕ್ ಬೀತ್.

ತಕ್ಷಣ ಅವಳ್ ಬಾಯಿ ಬಡಿಯದಂಗೆ ಅವ್ರ ತುಟಿಗೆ ಒಂದ್ ಪ್ಲಾಸ್ಟರ್‌ನ ಬೀತ್. ಅವುಳು ಬೊಬ್ಬೆ ಹಾಕಿಕೆ ಪೇಚಾಡ್ತ್‌ತ್, ಆದ್ರೆ ಪ್ಲಾಸ್ಟರ್ ಅಂಟಿತ್ತ್. ಹಂಗಾಗಿ ಅವ್ರ ದೊಂಡೆಂದ ಸ್ವರನೆ ಹೊರ್‌ವತ್ತ್‌ಲ್ಲೆ.

ಕರಾಟೆ ಕಾಳನ ಹಿಡ್ತ್‌ಂದ ತಪ್ಪಿಸ್ಕಿಣಿಕೆ ಅವ್ಳ್‌ಗೆ ಸಾಧ್ಯ ಆಗದೆ ಹೋತ್. ಸೈಕಲ್ ಉಸ್ಮಾನ್‌ದ್ ಕೈಲಿ ಒಂದ್ ಉದ್ದದ ರಿಬ್ಬನ್‌ನ ಇತ್ತ್. ಅಂವ ಆ ರಿಬ್ಬನ್‌ಂದ ಅವ್ರ ಕೈಗಳ್ನ ಹಿಂದಕ್ಕೆ ಎಳ್ದ್ ಕಟ್ಟಿತ್.

ಕುಡ್ದ್ ಅಮುಲಾಗಿ ಮಲ್‌ಗಿದ್ದ ಸೋಮಯ್ಯಂಗೆ ಈ ಸಂಗ್ತಿ ಒಂದೂ ಗೊತ್ತಾತ್‌ಲೆ.

ಬಿದ್ದು, ಕರಾಟೆ ಕಾಳ ಇಬ್ಬರ್ ಸೇರಿ ನೀಲುನ ಹೊತ್ತ್‌ಕಂಡ್ ನಡ್ದೋ. ಸೈಕಲ್ ಉಸ್ಮಾನ್ ಅವುಕೆ ಟಾರ್ಚ್ ಲೈಟ್‌ನ ತೋರ್‍ಸಿಕ್ಕಂಡ್ ಮುಂದೆ ಹೋತಿತ್ತ್.

ನೀರ್‌ಂದ ತೆಗ್ದ ಮೀನ್ ನೆಲಕ್ಕೆ ಬಿದ್ದಂಗೆ ನೀಲು ಹೊರಲಾಡ್‌ಕೆ ಸುರ್ ಮಾಡ್ತ್.

ಅವು ಮೂರ್ ಜನ ಜೀಪ್‌ನ ಹತ್ರಕೆ ತಲ್‌ಪಿದೊ. ಡ್ರೈವರ್ ಮೊಣಯ್ಯ ಜೀಪ್‌ಲಿ ಕುದ್ದ್‌ಕಂಡ್ ಇತ್ತ್. ಜೀಪ್ ಎಲ್ಲವುನ ಹೊತ್ತ್‌ಕಂಡ್ ಬುರ್‍ನ್ತ ಹೋತ್.

ಬಿದ್ದು ಮತ್ತೆ ಕಾಳ ಹಿಂದೆ ಕುದ್ದಿದ್ದೋ. ಇವರಿಬ್ಬರ ಮದ್ಯಲಿ ನೀಲು. ಉಸ್ಮಾನ್ ಡ್ರೈವರ್‌ನ ಒಟ್ಟಿಗೆ ಕುದ್ದಿತ್ತ್.

ನೀಲುಗೆ ಅರ್ಧ ಜೀಂವ ಹೋದಂಗೆ ಆತ್. ಈ ನಾಲಾಯಕ್ ರೌಡಿಗಳ ಕೈಯಿಂದ ಇನ್ನ್ ನಾನ್ ಬದ್‌ಕಿ ಬಾದು ಸಾಧ್ಯನೇ ಇಲ್ಲೇತ ಅವುಳಿಗನಿಸಿತ್.

"ಏನ್‌ನೇ ಗೂಡೆ, ಒಳ್ಳೆ ಗೊಂಬೆಯಂಗೆ ಒಳಲ್ಲ ಅದೆಂತ ಪೊರ್ಲು ನಿಂದ್, ನೀನ್ ರಾಣಿ ಕುಮಾರಿ ನಂಗೆ ಒಳಲ್ಲ"

ಕಾಳ ಮಾತ್ ಸುರ್ ಮಾಡಿ ನೀಲುನ ಹೆಗ್‌ಲ್‌ಗೆ ಕೈ ಹಾಕಿ ಮೊಖನ ಸವ್‌ರ್‌ತ್.

"ಏ! ಗಾಳಿಮರ ಸೋಮಯ್ಯನ ಕೊಂಡಾಟದ ಮಗ್‌ಳೇ, ನಮ್ಮ ರಂಜನ್‌ನ ಕೊಲ್ಲಿಕೆ ಸಾಯಮಾಡ್‌ದವಳೆ; ನಿನ್ನ ನಾವ್ ಒಮ್ಮೆ ಸೆರಿಯಾಗಿ ಸರ್ವಿಸ್ ಮಾಡ್‌ವೆ ನೋಡ್‌ಕ" ಪೋರ್‌ಪೀಲ್ ಐಂಡ್ ಅನದರ್ ವೀಲ್ ಕಂಡೀಶನ್‌ಲೇ ಮತ್ತೆ ನಾವ್ ನಿನ್ನ ರೋಡ್‌ಗೆ ಇಳ್ಸ್‌ದು. ನಿನ್ನ ಸಮ್‌ದ ಸ್ಪೇರ್‌ಪಾರ್ಟ್ಸ್‌ನಲ್ಲ ನಾವ್ ಬದಲ್ ಮಾಡಿ ಹಾಕುವೆ ನೋಡಿಕ.

ಡ್ರೈವರ್ ಮೊಣಯ್ಯ ಹೇಳ್ತ್.

ಒಂದ್ ಗಂಟೆ ಕಳ್ದ್ ಆ ಜೀಪ್ ಒಂದ್ ದೊಡ್ಡ ಕಬ್ಬಿಣದ ಗೇಟ್ ದಾಟಿ ಬುಟ್ಟ್ ಒಂದ್ ಕಾಫಿ ತೋಟದ ಮಧ್ಯಕ್ಕಾಗಿ ಮಣ್ಣ್ ರಸ್ತೇಲಿ ಓಡ್ತ್. ದೊಡ್ಡ ಒಂದ್ ಬಂಗ್ಲೆ ಮುಂದೆ ಹೋಗಿ ನಿತ್ತ್‌ಕಂಡತ್. ಇದೆಲ್ಲಾ ಆಕನ ಸುಮಾರ್ ರಾತ್ರಿ ಎರ್‌ಡ್ ಗಂಟೆ ಆಗಿತ್ತ್.

ಅವ್ ನೀಲುನ ಎತ್ತಿಕಂಡ್ ಬಂಗ್ಲೆ ಒಳಗೆ ಹೋದೊ. ಆರೇಳ್ ಕ್ಯಾಂಬರೆನ ದಾಟಿಕ್ಕಂಡ್ ಅವು ಒಂದ್ ಸ್ಪೆಶಲ್ ರೂಮ್‌ಗೆ ಹೋದೊ.

ಆ ಕೋಣೆದ್ ಗೋಡೆಲಿ ಬರೀ ಗೂಡೆಗಳ ಬೆತ್ತಲೆ ಪೋಟೋ ಹಾಕಿದ್ದೊ. ಅಲ್ಲಿದ್ದ ಬೀಟಿದ್ ಕುರ್ಚಿಲಿ ಕುದ್ದಿದ ನಾಕ್ ಜನ ಪ್ರಮುಖರ್‌ಗ ನೀಲುನ ಕಂಡ್ ಕುಷಿಲಿ ಜೋರಾಗಿ ನೆಗಾಡ್ದೊ.

ಹ....ಹ....ಹಾ, ಹೀ....ಹೀ....ಹೀೀ, ಹೋ....ಹೋ....ಹೋೀೀ

ಅವರ್‌ನ ಕಂಡ್ ನೀಲು ನಡ್‌ಗಿಕೆ ಸುರ್ ಮಾಡ್ತ್.

ಇನ್ಸ್‌ಪೆಕ್ಟರ್ ರಾಮ್‌ಮೂರ್ತಿ ಬೋರ್‌ಗುಡ್ಡೆ ದೇವಯ್ಯ, ಆಳ್‌ವ ಪಾರ್ಟಿದ್ ನಾಯ್ಕ ದಿವಾಕರ್ ಮತ್ತೆ ದೇವಯ್ಯನ ದೊಡ್ಡ ಪರಿಚಯ್‌ಗಾರ ಅಡ್ವೋಕೇಟ್ ರತೀಶ್, ಇವ್ ನಾಕ್ ಜನ ನೀಲುನ ಕಣ್‌ತುಂಬಾ ನೋಡ್‌ದೊ.

ಮೇಜ ಮೇಲೆ ಎಲ್ಲಾ ತರದ ಕಳ್ಳ್‌ದ್ ಬಾಟ್ಲಿಗ, ಚಿಕನ್ ಪ್ರೈ, ಮಟನ್ ಪ್ರೈ, ಪೋರ್ಕ್ ಎಲ್ಲಾ ಇತ್ತ್.

ಅಡ್ವೋಕೇಟ್ ರತೀಶ್‌ದ್ ಅಪ್ಪ ಅವ್ವ ಇದ್ದ ಮನೆ ಅದ್. ಅವು ಇಬ್ಬರ್ ಈಗ ಇಲ್ಲೆ. ರತೀಶ್ ಸಿಟಿಲಿ ಇದ್ದ್ ಅಂವ ಪ್ರಾಕ್ಟೀಸ್ ಮಾಡ್ತ ಇತ್ತ್. ಸುತ್ತ ಮುತ್ತ ಯಾರ ಮನೆಸ ಇಲ್ಲಿಲ್ಲೆ.

ತನ್‌ಗೆ ಗ್ಯಾನ ಆಕಾಕನ ಗೂಡೆಗಳ್‌ನ ಕರ್ಕಂಡ್ ಬಂದ್ ಬ್ಯಾಡದ ಕೆಲ್ಸಕ್ಕೆ ಬಳ್ಸಕಣಿಕೆ ದೇವಯ್ಯ ಈ ಮನೇನ ಉಪ್‌ಯೋಗಿಸ್‌ತಿತ್ತ್.

ನೀಲು ಹೆದ್ರಿ ಕಂಗಾಲಾಗಿ ನಾಕ್‌ಜನ್ರನ ನೋಡ್ತ್. ಕರ್‌ಣೆ ಹುಟ್ಟದ ಆ ಜನ್ರ ಕಣ್ಣ್‌ಲಿ ಅವಳಿಗೆ ಯಮರಾಜ ದೂತಂಗ ಇದ್ದಂಗೆ ಕಂಡ್‌ತ್.

ಕಾಲಿಗೆ ಬಿದ್ದ್ ಕೇಳ್‌ರೆಸ ಈ ರೌಡಿಗ ನನ್ನ ಸುಮ್ಮನೆ ಬುಡಿಕಿಲ್ಲೇಂತ ಅವ್‌ಳಿಗೆ ತೋರ್‍ತ್. ಆ ನಾಯ್ಕರ್‌ಗಳಲ್ಲದೆ ಅವಳ್ನ ಹೊತ್ತ್‌ಕಂಡ್ ಬಂದ ನಾಕ್ ಜನಾನೂ ಅಲ್ಲಿದ್ದೊ.

"ಲೋ ಕಾಳ ಅವಳ್ನ ಕೈದ್ ಹಗ್ಗನ ಬಿಚ್ಚ್‌ರ. ಆ ಪ್ಲಾಸ್ಟರ್‌ನ ಮೊಕಂದ ತೆಗಿ, ಒಂದ್ ಪೊರ್‌ಲ್ನ ಗೂಡೆನ ಹಿಂಗೆಲ್ಲ

**ಇಲ್ಲಿಯವರೆಗೆ.........**

ಬೋರುಗುಡ್ಡೆ ದೇವಯ್ಯನ ಮಂಜ್ಞ ರಂಜನ್‌ನ ಕೊಲೆ ಆಗಿದ್ದದೆ. ಹಂಗಾಗಿ ಸಂಸಯದ ಮೇಲೆ ಗಾಳಿಮರ ಸೋಮಯ್ಯನ ಮಂಜ್ಞನ ಲಾಕಪ್‌ಗೆ ಹಾಕಿದ್ದವೆ. ಸೋಮಯ್ಯನ ಮಗಳ್‌ನ ಸಹ ವಿಚಾರಿಸಿ ಮನೆಗೆ ತಂದ್ ಬುಟ್ಟವೆ. ದೇವಯ್ಯ ರೌಡಿ ಬಿದ್ದುನ ಕರ್ದ್ ಏನೋ ಪಿಸುಗುಟ್ಟಿದ್ದೆ. ಇತ್ತ ದೇವಯ್ಯ ಕೊಟ್ಟ ಹಣಲಿ ಗಾಳಿಮರ ಸೋಮಯ್ಯ ಚಾಪೆಗೆ ಹೋಗಿ ಕುತ್ತಿಗೆಗಂಟ ಕುಡ್ದ್ ಬಂದ್ ಮನೇಲಿ ಗೋಚರನೆ ಇಲ್ಲೆ ಬಿದ್ದ್‌ದ್ದದೆ. ರಾತ್ರೆ ಆದ್ರಂದ ಸ್ವಲ್ಪ ಏನಾರ್ ತಿನ್ನಂಕುತ್ತೇಳಿ ತಿಂದ್ ನೀಲು ಸಹ ಮಲ್ಕ್ಂಡದೆ. ಆಗ ಚಂಗುಮಣಿನ ಸ್ವರಲೇ ಬಿದ್ದುನ ಕಡೆವು ಸೋಮಯ್ಯನ ಮನೆ ಬಾಗಿಲ್ ಹಕ್ಕಲೆ ಬಂದ್ ರಾಗಲಿಕರ್ದ್‌ವೆ. ಅಂಣ ಬಾತ್ ತೇಳಿ ನೀಲು ನಿದ್ರೆ ಕಂಣ್‌ಲಿ ಬಂದ್ ಬಾಗ್‌ಲ್ ತೆಗೆದದೆ....................

ಮುಂದೆ ನೀವ್ ಓದುಕು

ಮಾಡುದಾ ಮಾರಾಯ" ನಿಂಗೆಮನಿ ಸೊಯ್ಯಗಿಯ್ಯಾ ಉಟ್ಟಾ?

ಒಂದ್ ಸಂತೋಷದಾಗಿ ನೆಗಾಡಿಕಂಡ್ ಬೋರುಗುಡ್ಡೆ ದೇವಯ್ಯ ಹೇಳ್ತ್. ಅವು ನಾಕ್ ಜನನು ಸೇರಿ ನೀಲುನ ಸುತ್ತ ನಿಂತೊ. ಕರಾಟೆ ಕಾಳ ಅವ್ವ ಕೈದ್ ರಿಬ್ಬನ್‌ನ ಬಿಚ್ಚಿತ್. ಪ್ಲಾಸ್ಟರ್ ಎಳ್ದ್ ತೆಗ್ತ್.

"ನೀನ್ ಹೆದ್ರ್ ಬೇಡನೆ ಗೂಡೆ, ನಾವ್ ನಿನ್ನ ತಿಂಬದೊಂದ್ ಇಲ್ಲೆ" ದೇವಯ್ಯ ನೀಲುಗೆ ಧೈರ್ಯ ಕೊಟ್ಟತ್.

"ಈ ಇನ್ಸ್‌ಪೆಕ್ಟರ್‌ಗೆ ನಿನ್ನ ಒಮ್ಮೆ ಲಾಯ್ಕಾಗಿ ಎನ್‌ಕ್ವಯರಿ ಮಾಡೋಕುಗಡ, ಎನ್ ನಡ್‌ದತ್ತ್ ಅದ್ನೆಲ್ಲಾ ಸರಿಯಾಗಿ ಹೇಳಿ ಕೊಡ್"

"ನಂಗೆ ಒಂದೂ ಗೊತ್ತಿಲ್ಲೆ, ನಾನ್ ಸೊಯಿ ತಪ್ಪಿ ಬಿದ್ದ್ ಹೋಗಿದ್ದೆ" ನೀಲು ಹೇಳ್ತ್.

ಇನ್ಸ್‌ಪೆಕ್ಟರ್ ರಾಮ್‌ಮೂರ್ತಿ ಅವಳ್‌ನ ಎನ್‌ಕ್ವಯರಿ ಮಾಡಿಕೆಂತ ಪಕ್ಕದ ಕ್ಯಾಂಬರೆಗೆ ಕರ್ಕಂಡ್ ಹೋತ್.

"ಏ ಗೂಡೆ ಸತ್ಯ ಹೇಳ್‌ನೆ ರಂಜನ್‌ನ ಕೊಂದದ್ ಯಾರ್‌ತ? ರಂಜನ್‌ನ ಕೊಂದದ್ ಚಂಗುಮಣೀನಾ? ಅಲ್ಲ ರಂಜನ್ ನಿನ್ನ ಒಮ್ಮೆ ಮುಟ್ಟಿ ನೋಡ್ದ್‌ಕೆ ನೀನೇ ಹೇಳಿ ಕೊಲ್ಸಿದಾ? ಹೆಂಗೆ? ಹ್.... ಬೇಗ ಹೇಳ್"

ತನ್ನ ಎರಡೂ ಕೈಯಿಲಿ ಅವ್ವ ಸೊಂಟನ ಒತ್ತಿ ಹಿಡ್‌ಕಂಡ್ ಇನ್ಸ್‌ಪೆಕ್ಟರ್ ಕೇಳ್ತ್.

"ಅವ್ವಯ್ಯಾ......." ಬ್ಯಾನೆ ತಡಿಯಕೆ ಆಗದೆ ನೀಲು ಜೋರಾಗಿ ಕಿರ್ಚಿತ್.

"ಅವ್ವನೂ ಇಲ್ಲೆ, ಅಪ್ಪನೂ ಇಲ್ಲೆ, ಮರ್ಯಾದಿಲಿ ಹೇಳ್, ಯಾರ್ ಕೊಲೆ ಮಾಡ್‌ದವುತ?" ಸ್ವಲ್ಪ ಜೋರಾಗಿ ಹೇಳ್ತ್ ಇನ್ಸ್‌ಪೆಕ್ಟರ್.

ನೀಲೂ ಉಸ್ರು ಬುಟ್ಟತ್‌ಲೆ.

"ನೀನ್ ಬಾಯಿ ಬುಡ್‌ದುಲೆ ಅಲ್ಲನೆ ಗೂಡೆ? ಯಾರ್‌ನ ಬಚಾವು ಮಾಡಿಕ್ಕಾಗಿ ನೀನ್ ಹಿಂಗೆ ಉಸ್ರ್ ಬುಡ್‌ದೇ ಇರ್ದು ರಂಜನ್‌ಗೆ ಸಿಗದೇ ಹೋದ್‌ನ್ನ ನಾವ್ ತಕ್ಕಳದೆ ಬುಡಿಕಿಲೆ. ನಮ್ಮನ್ನ ಕೊಂದ್ ನಿನ್ನ ಯಾರ್ ಬಚಾವು ಮಾಡ್ವೇಂತ ನಾವ್ ನೋಡ್‌ವೆ. ಗೊತ್ತಾತ!"

ಅಯ್ಯೋ....... ವೆಂಕಟರಮಣಸ್ವಾಮಿ, ಯಾರ್ ಕೂಡ ಸಹಾಯ ಮಾಡಿಕೆ ಇಲ್ದೆ ಹೋದೋನ. ನೀಲುಗೆ ಬಂದ ದುಃಖನ ತಡಿಯಕೆ ಆಗದೇ ಹೋತ್. ಆದರೆ ಅವ್ವ ದುಃಖನ ಹೊರ್ಗೆ ಹಾಕಿಕೆ ಇನ್ಸ್‌ಪೆಕ್ಟರ್ ರಾಮ್‌ಮೂರ್ತಿ ಬುಡೊಕಲ್ಲ. ಅವ್ವ ಹೂವಂತ ಸರೀರ ರಾಮ್‌ಮೂರ್ತಿನ ಕಪಿಮುಷ್ಠಿಲಿ ಸಿಕ್ಕಿ ಹೋಗಿತ್ತ್. ಅವಳ್ ತಪ್ಪಿಸ್ಕಿಣಿಕೆ ಪೇಚಾಡಿದ್ರೂ ಏನ್ ಪ್ರಯೋಜನ ಆಗದೇ ಹೋತ್.

ರಾಮ್‌ಮೂರ್ತಿ ಹೊರಗೆ ಬಂದ ಮ್ಯಾಲೆ ಅಡ್ವೋಕೇಟ್ ರತೀಶ್ ಒಳಗೆ ಹೋತ್. ಅಂವ ಬಂದ ಮ್ಯಾಲೆ ರಾಜ್‌ಕಾರಿಣಿ, ದಿವಾಕರ್‌ನು ಹೋಗಿ ಬಂದೋ. ಇನ್ನ್ ಬೋರ್‌ಗುಡ್ಡೆ ದೇವಯ್ಯ ಹೋತು. ಅಲ್ಲಿಂದ ನಾಕ್‌ಜನ ಬ್ಯಾರೆವು ಒಳೋ ಅವಳ್ನ ಹೊತ್ತ್ ಕಂಡ್ ಬಂದವು. ದೇವಯ್ಯನು ಹೋಗಿ ಬಂದ ಮ್ಯಾಲೆ ಕರಾಟೆ ಕಾಳ ಒಳಗೆ ಹೋತ್.

ನೀಲು ಅಲ್ಲಾಡದೆ ಬಿದ್ದ್‌ಕಂಡ್ ಇತ್ತ್. ಅವ್ವ ಬಟ್ಟೆ ಎಲ್ಲಾ ಚೆಲ್ಲಾಪಿಲ್ಲಿಯಾಗಿತ್ತ್. ಕಾಳ ಮುಟ್ಟಿದ್ರು ನೀಲು ಮಾತ್ರ ಅಲ್ಲಾಡ್‌ತ್‌ಲೆ. ಅವಂಗೆ ಸಂಸಯ ಯಾಕೋ ಬಾತ್.

ಅಂವ ನೀಲುದ್ ಮೂಗ್‌ನ ಹತ್ರ ತನ್ನ ಕೈನ ಹಿಡ್ತ್. ಉಸ್‌ರ್ ನಿಂತೆ ಹೋಗ್‌ಟ್ಟು. ಬೋರುಗುಡ್ಡೆ ದೇವಯ್ಯನು ಸ್ನೇಹಿತರ್‌ಗ ಎರ್‌ಡನೇ ಸುತ್ತ್ ಕಳ್ಳ್ ಕುಡಿಯಕೆ ಮ್ಯಾಜದ ಸುತ್ತ ಕುದ್ದಿದ್ದೋ.

ಅಸ್ವರಲಿ ಕರಾಟೆಕಾಳ ಒಳಗೆಂದ ಗಾಬ್ರ್‌ಲಿ ಓಡಿ ಬಂದ್ ದೇವಯ್ಯನ ಕೆಮಿಲಿ ಏನೋ ಹೇಳ್ತ್.

"ಸಾರ್, ನೀಲುಗೂಡೆ ಪಟ್ಟ ಕಂಡದೆ. ಉಸ್‌ರಾಡ್‌ತ ಇಲ್ಲೆ ಸೊಲ್ಪ ಬನ್ನಿ ಇತ್ತಾ!!!...."

**(ಸಶೇಷ)**

# ಶುಭವಿವಾಹ

1. ಮೇಕೇರಿ ಗ್ರಾಮದ ಓಡಿಯನ ದಿ. ಈರಪ್ಪನವರ ಮಗಳು **ಬೇಬಿಕುಮಾರಿ (ಝಾನ್ಸಿ, ಸ್ವಾತಿ)** ಇವಳ ವಿವಾಹವು ಮದೆನಾಡಿನ ನೆರಿಯನ ಮಂದಣ್ಣನವರ ಪುತ್ರ **ನಾಣಯ್ಯ**ನೊಂದಿಗೆ ದಿನಾಂಕ 26-5-1999ರಲ್ಲಿ ವಿಜೃಂಭಣೆಯಿಂದ ನಡೆಯಿತು.
2. ಸಿದ್ದಾಪುರ ಹೊಸೂರು ಮನೆಯ ಲಕ್ಷ್ಮಣ ಇವರ ಮಗ **ಗಣೇಶ**ನ ವಿವಾಹವು ಮೈಸೂರಿನಲ್ಲಿ ವಾಸವಿರುವ ಪುದಿನೆರವನ ನಾಣಯ್ಯನವರ ಪುತ್ರಿ **ಮಮತಾ**ಳಿಗೂ ದಿನಾಂಕ 30-5-99ರಲ್ಲಿ ಸೈಂಟ್ ಜೋಸೆಫ್ ಸೆಂಟಿನರಿ ಹಾಲ್‌ನಲ್ಲಿ ನಡೆಯಿತು.
3. ಪಾಲೂರು ಗ್ರಾಮದ ಬೈತಡ್ಕ ಕುಂಞ್ಞಪ್ಪನವರ ಮಗ **ಶಶಿಧರ**ನ ವಿವಾಹವು ಮಡಿಕೇರಿ ನಿವಾಸಿ ಪರಿವಾರನ ಅಪ್ಪಾಜಿಯವರ ಮಗಳು **ಗೀತಾಂಜಲಿ**ಯೊಡನೆ ದಿನಾಂಕ 3-6-99ರಲ್ಲಿ ಮಡಿಕೇರಿಯ ಕೆಳಗಿನ ಗೌಡಸಮಾಜದಲ್ಲಿ ನಡೆಯಿತು.
4. ಅವಂದೂರು ಗ್ರಾಮದ ಕಡ್ಯದ ರಾಘುವಯ್ಯನವರ ಮಗ **ತಿಲಾಕ್ಷ**ನ ವಿವಾಹವು ಮರಗೋಡು ಗ್ರಾಮದ ಪರಿಚನ ಗೋಪಾಲನವರ ಮಗಳು **ಅಮೃತಾ ಕುಮಾರಿ**ಯೊಡನೆ ದಿನಾಂಕ 4-6-1999ರಲ್ಲಿ ಮಡಿಕೇರಿಯ ಮೇಲಿನ ಗೌಡ ಸಮಾಜದಲ್ಲಿ ನಡೆಯಿತು.
5. ಬೆಂಗಳೂರು ನಿವಾಸಿ ಪಾಡಿಚಟ್ಟೀರ ದಿ. ಮಂದಣ್ಣನವರ ಪುತ್ರ **ಮೋಹನ್**‌ನ ವಿವಾಹವು ಮಡಿಕೇರಿ ನಿವಾಸಿ ಮೂಟೇರ ಚಂಗಪ್ಪನವರ ಮಗಳು **ಶೈಲಾ**ಳೊಂದಿಗೆ ದಿನಾಂಕ 4-6-1999ರಂದು ಮಡಿಕೇರಿಯ ಕೆಳಗಿನ ಗೌಡ ಸಮಾಜದಲ್ಲಿ ವಿಜೃಂಭಣೆಯಿಂದ ನಡೆಯಿತು.
6. ಅವಂದೂರು ಗ್ರಾಮದ ಪಾಣತ್ತಲೆ ಅಣಯ್ಯನವರ ಮಗ **ಸೋಮಯ್ಯ**ನ ವಿವಾಹವು ಮದೆಗ್ರಾಮದ ಗುಡ್ಡೆಮನೆ ಮುತ್ತಣ್ಣನವರ ಮಗಳು **ಹಸನಾವತಿ**ಯೊಡನೆ ದಿನಾಂಕ 6-6-1999ರಲ್ಲಿ ಮಡಿಕೇರಿಯ ಮೇಲಿನ ಗೌಡಸಮಾಜದಲ್ಲಿ ನಡೆಯಿತು.
7. ಸಿದ್ದಾಪುರ ಸಮೀಪದ ನೆಲ್ಲಿ ಹುದಿಕೇರಿ ಗ್ರಾಮದ ತೋಟಂಬೈಲು ಅಪ್ಪಣ್ಣನವರ ಮಗಳು **ಶುಭಾಷಿನಿ**ಯ ವಿವಾಹವು ಪಾಲಿಬೆಟ್ಟದ ಅತ್ತೂರು ಗ್ರಾಮದ ಜಪ್ಪೆಗೋವೆ ಅಯಪ್ಪನವರ ಮಗ **ಕುಮಾರ್**‌ನೊಡನೆ ದಿನಾಂಕ 20-5-99ರಲ್ಲಿ ಸಿದ್ದಾಪುರದ ಸ್ವರ್ಣಮಾಲ ಕಲ್ಯಾಣ ಮಂಟಪದಲ್ಲಿ ಭಾರೀ ವಿಜೃಂಭಣೆಯಿಂದ ನಡೆಯಿತೆಂದು ತಿಳಿದು ಬಂದಿದೆ.

# ೆಂಗಳೂರ್ಲಿ ಒಂದು ಅಪೂರ್ವ ಸಮಾರಂಭ "ಕೊಡಗ್‌ನ ಸ್ವಾತಂತ್ರ್ಯ ವೀರರ್‌ಗೆ ಸಂದ ಗೌರವ"

ನಮ್ಮ ದೇಶದ ಚರಿತ್ರೆನ ತಕ್ಕಂಡ್ರೆ ಕೊಡ್‌ಗ್‌ನವರ ಪಾತ್ರ ಾಹಳಷ್ಟ್ ಉಟ್ಟು. ಅದರ್ಲಿ ಗೌಡ ಜನಾಂಗದವರ್ದೂ ಮಹತ್ರವಾಗುಟು. ಾವುಸ ಸಮಾಜದ ದುರ್ಬಳಕೆಂದ, ನಮ್ಮ ಕ್ರಾಂತಿ ವೀರರ್ನ ುದ್ದೇಶಪೂರ್ವಕವಾಗಿಯೆ ಕೊಡ್‌ಗ್‌ನ ಜನತೆ ಮರ್ತ್‌ದ್‌ತಕಂಡದೆ. ಾವು ಈಗ ಸುಮಾರ್ 162 ವರ್ಷಗಳ ಹಿಂದಕ್ಕೆ ಪೋಯಿ. ಈಗ ಲ್ಲವ್‌ಕೆ ತಿಳ್ದಂಗೆ "ಸ್ವಾತಂತ್ರ್ಯ ಸಂಗ್ರಾಮಿ ಹುತಾತ್ಮ ಸುಬೇದಾರ್ ುಡ್ಡೆಮನೆ (ಈಗನ ಗುಡ್ಡೇರ, ಬಲಮುರಿ) ಅಪ್ಪಯ್ಯಗೌಡ, 1837ರ ಕ್ಟೋಬರ್ 31ರಂದು, ಮಡಿಕೇರಿ ಕೋಟೆ ಮುಂದ್‌ಗಡೆ ್ರಿಟಿಷ್‌ರ್ ಇವರ್ನ ಗಲ್ಲಿಗೆ ಹಾಕಿತ್. ಈ ದೀರ್ಘಾವಧಿಲಿ ಲ್ಲೊಂದ್, ಇಲ್ಲೊಂದ್‌ತ್ತೇಳಿ ಕೂಗ್‌ಬುಟ್ರೆ ಬ್ಯಾರೆ ಯಾರೂ ಇವ್ರ ೆಸ್ರ್ ಹೇಳವೇ ಇಲ್ಲಾದಾಗುಟು. ಈಚೆಗೆ ಭಾರಿ ಪ್ರಯತ್ನಂದ, ಕೆಲವು ಾತೈಷಿಗ ಸೇರಿ, ಕಷ್ಟಪಟ್ಟ್ ಬಲಾತ್ಕಾರ್ಲಿ ಮಡಿಕೇರಿ ಜೂನಿಯರ್ ಾಲೇಜ್ ಮುಂದ್‌ಗಡೆ ಇರ್ವ ರಸ್ತೆಗೆ "ಸ್ವಾತಂತ್ರ್ಯ ಹೋರಾಟಗಾರ ುಡ್ಡೆಮನೆ ಅಪ್ಪಯ್ಯಗೌಡ ರಸ್ತೆ" ತ್ತೇಳಿ ಹೆಸ್ರ್ ಹಾಕಳೊ. ಇದರ್ನ ಮ್ಮ ಸಮಾಜಕ್ಕೆ ಮೊದ್ಲುಗೆ ಹೋಗಿ ಬರವೆಲ್ಲಾ ನೋಡಿರುವೊ. ಾದ್‌ಕೆ ನಾವೆಲ್ಲಾ ಆಭಾರಿಯಾಗಿಯೊಳೊ. ಎರಡ್ನೆದಾಗಿ, 1837ರ ಾವುರ ಸುಳ್ಯದ ಕಾಟ್‌ಕಾಯಿಲಿ 'ಶ್ರೀ ಕೆದಂಬಾಡಿರಾಮಯ್ಯ ಗೌಡ್ರ್ ಾನ ಸಂಘಟನೆ ಮಾಡಿ ಸಾಕಷ್ಟು ಹೋರಾಟ ಮಾಡ್ಯೊಳೊತ್ತೇಳಿ ಚರಿತ್ರೆಲಿ ಉಟ್ಟು. ಇವರ್ನ ಆಗಿನ ಬ್ರಿಟಿಷರ್ ಮಗಂಳೂರು ಬಾವುಟ ುಡ್ಡೇತ್ತೇಳ್‌ವಲ್ಲಿ ಗಲ್ಲಿಗೆ ಹಾಕಿದೊತೇಳ್ದ್ ತಿಳ್ದ್‌ಬಂದದೆ. ಇನ್ನ್ ಮೂರ್ನೆದಾಗಿ 1942ರ ಕಾಲಲಿ ಸ್ವಾತಂತ್ರ್ಯ ಚಳುವಳಿಲಿ ಶ್ರೀ ಪೂಜಾರಿರ ರಾಮಪ್ಪಗೌಡ ಭಾಗವಹಿಸಿ ಮಡಿಕೇರಿ ಕೋಟೆಲಿ, ರಾತೋರಾತ್ರಿ 12 ಗಂಟೆಗೆ ನಮ್ಮ ದೇಶದ ತ್ರಿವರ್ಣ ಧ್ವಜ ಹಾರಿಸಿದ ಪ್ರಥಮ ವ್ಯಕ್ತಿತೇಳ್‌ವ ಕೀರ್ತಿ ಉಟ್ಟು. ಈ ಇಬ್ಬರ ಬಗ್ಗೆ ನಾವು ಅಲ್ಲಿ ಇಲ್ಲಿ ೇರ್ದ ಕಡೆ ಮಾತಾಡ್ದು' ಬುಟ್ರೆ ಬ್ಯಾರೆ ಯಾವ ಗೌರವ ಸಿಕ್ಕಿದ್ ಾಂಬೊದ್‌ಲೆ. ಈ ಎಲ್ಲದರ ಬಗ್ಗೆ ನಮ್ಮ ಕಿರ್‌ಚಾಟ ಬೆಂಗಳೂರ್‌ಗೆ ೇಳ್ಸಿತ್‌ಕಂಡದೆ. ಅವು ಎನ್ ಮಾಡ್ದೊತ ಒಮ್ಮೆ ಮುಂದೆ ನೋಡಿ. ೆಂಪೆಗೌಡ ರೂರಲ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ. ಿ.(ರಿ.), ಜಕ್ಕೂರು, ಬೆಂಗಳೂರು, ಇದ್ ಕೊಡ್‌ಗ್‌ದ ಬೆಂಗ್ಳೂರ್‌ಗೆ ಹೋಗಿ ನೆಲೆ ಊರ್ದ ಗೌಡ್‌ರುಗಳ ಸಂಸ್ಥೆ, 1984ರಲ್ಲಿ ಸ್ಥಾಪನೆ ಾಗಿ, ಇದ್ರ ಆಡಳಿತ ಮಂಡಳಿ ಸಂಸ್ಥೆ ಹೆಸ್ರ್‌ಲಿ 9 ಎಕ್ರೆ ಜಾಗ ಪಡ್ದ್ ಅದರ್ನ 110 ಮನೆ ಸೈಟ್‌ಗಳಾಗಿ ಮಾಡಿ, ಸದಸ್ಯರೊಳಗೆ ಮಾರಾಟ ಮಾಡಿಕೊಂಡಳೊ. ಈಗ ಶ್ರೀ ನಂಗಾರು ನಾಣಯ್ಯ, ವಾಣಿಜ್ಯ ತೆರಿಗೆ ಉಪ ಆಯುಕ್ತರ್, ಮಂಗಳೂರು, ಇವು ಇದ್ರ ಅಧ್ಯಕ್ಷರ್. ಇವರ ಪ್ರಯತ್ನಂದ ಈ ಜಾಗ ಒಂದು ಬಡಾವಣೆಯಾಗಿ ಮಾರ್ಪಾಡ್ ಮಾಡಿ, ಒಂದು ಮುಖ್ಯ ರಸ್ತೆ, ಮೂರು ಅಡ್ಡರಸ್ತೆಗಳ್ನ ಮಾಡ್ಯೊಳೊ. ಈ ಬಡಾವಣೆಗೆ ಮತ್ತೆ ರಸ್ತೆಗಳಿಗೆ ಹೆಸ್ರ್ ಹಾಕುವ ಏರ್ಪಾಡ್‌ನ ಮಾಡ್‌ಕನ, ಇವುಕೆ ಗ್ಯಾನಬಂದದ್‌ಕೊಡ್‌ಗ್‌ನ ವೀರಗೌಡ್‌ರು ಮತ್ತೆ ಒಬ್ಬ ಗೌಡ ಸ್ವಾಮೀಜಿನ. ತಾರೀಖ್ 30-5-99ರಂದ್ ಉದ್ಘಾಟನಾ ಸಮಾರಂಭನ ಏರ್ಪಾಡ್ ಮಾಡಿ ಕೊಡ್‌ಗ್‌ನವರ್ನಸ ಈ ಅಪೂರ್ವ ಸಮಾರಂಭಕ್ಕೆ ಕರ್ಸಿದೊ. ಈ ಸಮಾರಂಭಲಿ ಬಡಾವಣೆಗೆ ಹೆಸ್ರ್‌ನ "ಆದಿಚುಂಚನಗಿರಿ ಮಠದ ಸ್ವಾಮಿಜಿಗಳಾದ ಶ್ರೀಶ್ರೀಶ್ರೀ ಬಾಲ ಗಂಗಾಧರ ಸ್ವಾಮೀಜಿ ಬಡಾವಣೆತ್ತೇಳಿ" ಅವ್ರ್‌ಂದ ಜ್ಯೋತಿ ಬೆಳಗಿಸಿ ಉದ್ಘಾಟನೆ ಮಾಡ್ಸಿದೊ. ಮಾನ್ಯ ಶ್ರೀ ಸ್ವಾಮೀಜಿಯವು ಆಶೀರ್ವಚನ ಮಾಡ್ದೊ. ನಂತ್ರ ಮುಖ್ಯರಸ್ತೆಗೆ '1837ರ ಸ್ವಾತಂತ್ರ್ಯ ಹೋರಾಟಗಾರ ಶ್ರೀ ಗುಡ್ಡೆಮನೆ ಅಪ್ಪಯ್ಯಗೌಡ ರಸ್ತೆತ್ತೇಳಿ ಹೆಸ್ರ್ ಹಾಕಿದ್ನ, ಮುಖ್ಯ ಗೌರವಾನ್ವಿತ ನೆಂಟ್ರಾಗಿ ಬಂದ ಶ್ರೀ ಸಿ. ಕೆ. ಜಾಫರ್ ಷರೀಫ್, ಮಾಜಿ ರೈಲ್ವೆ ಮಂತ್ರಿಗ ಉದ್ಘಾಟನೆ ಮಾಡ್ದೊ. ಇನ್ನೊಬ್ಬ ನೆಂಟ್ರಾದ ಶ್ರೀ ಕೆ. ವಿ. ಜಯರಾಂ, ಮಾಜೀ ಗ್ರಾಮ ಪಂಚಾಯಿತಿ ಅಧ್ಯಕ್ಷ, ಜಕ್ಕೂರು, ಬೆಂಗಳೂರು ಶಿಲ್ಪಿ 'ಕೆಂಪೇಗೌಡ ರಸ್ತೆ'ನ ಉದ್ಘಾಟನೆ ಮಾಡ್ದೊ. ಹಂಗೆ ಶ್ರೀ ಕುರುಂಜಿ ವೆಂಕಟ ರಮಣ ಗೌಡ, ಸುಳ್ಯದ ಅಮರ ಶಿಲ್ಪಿ ಇವು 1837ರ ಸ್ವಾತಂತ್ರ್ಯ ಹೋರಾಟಗಾರ ಶ್ರೀ ಕೆದಂಬಾಡಿ ರಾಮಯ್ಯ ಗೌಡ್ರ ರಸ್ತೆ ಮತ್ತೆ ಶ್ರೀ ಎನ್. ಎಸ್. ದೇವೀ ಪ್ರಸಾದ್, ಪ್ರಜಾವೇದಿಕೆ ರೂವಾರಿ, 1942ರ ಸ್ವಾತಂತ್ರ್ಯ ಹೋರಾಟಗಾರ ಶ್ರೀ ಪೂಜಾರಿರ ರಾಮಪ್ಪಗೌಡ ರಸ್ತೆ' ನ ಅನಾವರಣ ಮೊಡ್ದೊ. ಎಲ್ಲಾ ರಸ್ತೆಗಳ ಉದ್ಘಾಟನೆಲಿ ಆಯಾಯ ಕುಟುಂಬದವು ಕಲ್ಲ್ ಹಿಂದೆ ನಿಂತ್ ಪೋಟೊ ತೆಗೆಸಿದೊ. ಆಮೇಲೆ ಕುರುಂಜಿ ವೆಂಕಟ್ರಮಣ ಗೌಡ್ರ ಅಧ್ಯಕ್ಷತೆಲಿ ಸಭೆಸುರಾತ್. ಶ್ರೀಮತಿ ಸಾವಿತ್ರಿ ಪ್ರಾರ್ಥನೆ ಮಾಡ್ದೊರೊಂದಿಗೆ, ಸ್ವಾಗತ ಪದ್ಯನ ಶ್ರೀ ಹೊದ್ದೆಟೆ ಭವಾನಿಶಂಕರ್ ಹೇಳ್ದೊ. ಸ್ವಾಗತನ ಅಂದ್‌ನ ಸಭೆದ್ ರೂವಾರಿಯಾದ ಶ್ರೀನಂಗಾರ್ ನಾಣಯ್ಯನವ್ ಮಾಡಿ ಪ್ರಾಸ್ತವಿಕ ಆಗಿ ಮಾತಾಡ್ದೊ. ಮತ್ತೆ ಮುಖ್ಯ ನೆಂಟ್ರಾದ ಶ್ರೀ ಎನ್. ಎಸ್. ದೇವಿಪ್ರಸಾದ್‌ನವ್ರ ಶ್ರೀ ಕೆದಂಬಾಡಿ ರಾಮಯ್ಯಗೌಡ್ರ ಮತ್ತೆ ಅಮರಸುಳ್ಯದ ಕ್ರಾಂತಿ ಉತ್ಸವ ಬಗ್ಗೆ ಮಾತಾಡ್ದೊ. ಇನ್ನೊಬ್ಬ ಮುಖ್ಯ ನೆಂಟ್ರಾದ ಶ್ರೀ ಗುಡ್ಡೆಮನೆ ರಮೇಶ್, ಕೊಡ್‌ಗ್ ಗೌಡ ಸಾಂಸ್ಕೃತಿಕ ಅಕಾಡೆಮಿ, ಉಪಾಧ್ಯಕ್ಷರ್, ಮತ್ತೆ ಗುಡ್ಡೆಮನೆ ಅಪ್ಪಯ್ಯಗೌಡ ಸಂಸ್ಮರಣ ಸಮಿತಿ, ಸಂಚಾಲಕರ್, ವೇದಿಕೆಲಿ ಉಪಸ್ಥಿತರಿದ್ದ್, ಗುಡ್ಡೆ ಮನೆ ಅಪ್ಪಯ್ಯ ಗೌಡ್ರ ಮತ್ತೆ ಕೊಡ್‌ಗ್‌ಲಿ ಗೌಡವೀರರಿಗೆ ನಿರ್ಲಕ್ಷ್ಯ ಮತ್ತೆ ಜನಾಂಗಕ್ಕೆ ಆದ ಅನ್ಯಾಯದ ಬಗ್ಗೆ ಮಾತಾಡ್ದೊ. ಮತ್ತೆ ಶ್ರೀ ಕೆ. ವಿ. ಜಯರಾಂನವು ಶ್ರೀ ಕೆಂಪೆಗೌಡ್ರ ಬಗ್ಗೆ, ಶ್ರೀ ಧಂಬೆಕೋಡಿ ಎಸ್. ಆನಂದ, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ 'ಅಧ್ಯಕ್ಷ ಇವು ಶ್ರೀ ಪೂಜಾರಿರ ರಾಮಪ್ಪಗೌಡ್ರ ಬಗ್ಗೆ ಹಂಗೆ ಪ್ರೊ. ಶ್ರೀ ಪೂಜಾರಿ ಮೊಣ್ಣಪ್ಪ, ವಕೀಲ್ರ್ ಇವು ಅರಮನೆ ಮತ್ತು ಗುರುಮನೆ ಸಂಬಂಧದ ಬಗ್ಗೆ ಮಾತಾಡ್ದೊ. ಕಡೇಲಿ ಕುರುಂಜಿ ವೆಂಕಟ್ರಮಣ ಗೌಡ್ರ್, ಅಧ್ಯಕ್ಷ ಜಾಗಂದ, ಮಾತಾಡಿ ಅಂದ್‌ನ ಸಭೆ ಏರ್ಪಾಡ್, ಗೌಡ ಕ್ರಾಂತಿವೀರರ್ನ ಗ್ಯಾನ ಮಾಡಿಕ್ಕಂಡದ್, ಮತ್ತೆ ವಿದ್ಯಾಕ್ಷೇತ್ರದ ಬಗ್ಗೆ ಮಾತಾಡ್ದ ಮ್ಯಾಲೆ, ವಂದನೆನ ಶ್ರೀ ಪಾಣತ್ತಲೆ ಆರ್. ಪಳಂಗಪ್ಪನವ್ರು, ಸಹಕಾರ ಸಂಘಗಳ ಸಹಾಯಕ ನಿಂಬಂಧಕರ್, ಮಾಡ್‌ರೆ, ಶ್ರೀ ನಂಗಾರು ನಿಂಗರಾಜು, ಉಪನ್ಯಾಸಕರ್ ಸಭೆ ಕಲಾಪನ ಲಾಯಾಕ್ಕಾಗಿ ನಿರೂಪಿಸಿದೊ. ಕೊನೆಗೆ

20 ನೇ ಪುಟಕ್ಕೆ

# ದಿನಾಂಕ 11-5-1999ರಲ್ಲಿ ಮಡಿಕೇರಿಯಲ್ಲಿ ನಡೆದ ಗೌಡ ಮಹಿಳಾ ಒಕ್ಕೂಟ ವಾರ್ಷಿಕ ಸಭೆ ಮತ್ತು ವಾರ್ಷಿಕೋತ್ಸವದ ಮುಖ್ಯ ಅತಿಥಿಗಳ ಕಿರು ಪರಿಚಯ

**ಶ್ರೀಮತಿ ಪಡಿಕಲ್ಲು ಸೀತಮ್ಮ ಮಾದಪ್ಪ :** ಶಾಲಾ ಶಿಕ್ಷಕಿಯಾಗಿದ್ದು ಸ್ವ ಇಚ್ಛೆಯಿಂದ ನಿವೃತ್ತಿ ಹೊಂದಿ ತಮ್ಮ ಕಾರ್ಯಕ್ಷೇತ್ರವಾದ ಕೈಕೇರಿ ಗ್ರಾಮದಲ್ಲಿ ಸಮಾಜಸೇವೆ ಮಾಡುತ್ತಿದ್ದಾರೆ. ಕೊಡುಗೈಯ ದಾನಿಗಳು ಇವರು. ಇವರನ್ನು ಹಾರಾರ್ಪಣೆ ಹಾಗೂ ನೆನಪಿನ ಕಾಣಿಕೆ ನೀಡಿ ಗೌರವಿಸಿದ್ದಾರೆ. ಶ್ರೀಮತಿ ಚೀಯಂಡಿ ರಾಧ ಯಾದವನವರು.

**ಶ್ರೀಮತಿ ದಂಬೆಕೋಡಿ ಲೀಲಾ ಚಿಣ್ಣಪ್ಪ :** ತಮಗೆಲ್ಲಾ ಪರಿಚಯವಿರುವಂತೆ ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಮಾಜಿ ಭೂ ಮತ್ತು ಗಣಿಖಾತೆ ಸಚಿವರಾಗಿದ್ದ ಶ್ರೀಯುತ ದಂಬೆಕೋಡಿ ಚಿಣ್ಣಪ್ಪನವರ ಧರ್ಮಪತ್ನಿ ಹಾಗೂ ಕೊಡಗು ಜಿಲ್ಲಾ ಶಿಶು ಕಲ್ಯಾಣ ಸಂಸ್ಥೆಯ ಉಪಾಧ್ಯಕ್ಷೆಯಾಗಿ ಇದೀಗ ಆಯ್ಕೆಯಾಗಿದ್ದಾರೆ. ಸಮಾಜ ಸೇವಕಿಯೂ, ಹಾಲಿ ಗೌಡ ಒಕ್ಕೂಟದ ನಿರ್ದೇಶಕಿಯೂ ಆಗಿರುವ ಇವರನ್ನು ಹೂ ಹಾರ ಹಾಕಿ ಗೌರವಿಸಿದ್ದಾರೆ. ಶ್ರೀಮತಿ ನೀರ್ಪಾಡಿ ನಾಗವೇಣಿಯವರು.

**ಶ್ರೀಮತಿ ಬಳಪದ ಹೇಮಾವತಿ ಸೋಮಣ್ಣ :** ಇವರು ತಮ್ಮ ಕಾರ್ಯಕ್ಷೇತ್ರವಾದ ಮರಗೋಡಿನಲ್ಲಿ ಶಿಕ್ಷಣ ಹಾಗೂ ಇತರೆ ಎಲ್ಲಾ ಕ್ಷೇತ್ರಗಳಲ್ಲಿ ಉದಾರ ಸೇವೆ ಸಲ್ಲಿಸುತ್ತಾ ಇದ್ದಾರೆ. ಅತಿಥಿ ಸತ್ಕಾರದಲ್ಲಿ ಎತ್ತಿದ ಕೈ. ದಾನಿಗಳೂ, ಮಾದರಿ ಬೆಳೆಗಾರರೂ ಆಗಿದ್ದಾರೆ. ಇವರಿಗೆ ಗೌರವ ಸನ್ಮಾನ ನೀಡಿ ಆದರಿಸಿದ್ದಾರೆ. ಶ್ರೀಮತಿ ಪಂಜಿಪಳ್ಳ ಇಂದ್ರಾಕ್ಷಿ ವೆಂಕಪ್ಪನವರು.

**ಶ್ರೀಮತಿ ಪಟ್ಟಡ ಶೀಲಾಮಣಿ ಪ್ರಭಾಕರ್ :** ತಮಗೆಲ್ಲಾ ಈಗಾಗಲೇ ಪರಿಚಿತವಾಗಿರುವ ಮನೆ ಮನೆಯ ಸಂಗಾತಿಯಾಗಿರುವ ಗೌಡ ಜನಾಂಗದ ಮುಖವಾಣಿ ಏಕೈಕ ಪಾಕ್ಷಿಕ ಪತ್ರಿಕೆಯಾದ ಕೊಡಗು ಸಂಗಾತಿಯ ಸಂಪಾದಕಿ ಸಮಾಜದ ಸರ್ವತೋಮುಖ ಅಭಿವೃದ್ಧಿ ಬಯಸಿ ಪತ್ರಿಕೆಯನ್ನು ತಮ್ಮ ಪತಿಯವರ ಸಹಕಾರದಿಂದ ಹೊರ ತಂದಿದ್ದಾರೆ. ತನುಮನಧನ ಸರ್ವಸ್ವವನ್ನು ಧಾರೆಯೆರೆದು ಪತ್ರಿಕೆಯನ್ನು ನಡೆಸಿಕೊಂಡು ಹೋಗುತ್ತಲಿದ್ದಾರೆ. ಇವರಿಗೆ ನೆನಪಿನ ಕಾಣಿಕೆ ಮತ್ತು ಹಾರಾರ್ಪಣೆ ಮಾಡಿದ್ದಾರೆ ಸೂದನ ಕಮಲಮ್ಮ ರಾಘವಯ್ಯನವರು.

**ಶ್ರೀಮತಿ ಮುಂದ್ರೀರ ಚಂದ್ರಾವತಿ ನಾಣಯ್ಯ :** ಕೊಡುಗೈ ದಾನಿಗಳೂ, ಬಡವರ ಹಿತಚಿಂತಕರೂ, ಮಾದರಿ ಬೆಳೆಗಾರರೂ ಅಲ್ಲದೆ ಸಮಾಜ ಸೇವಕಿಯಾಗಿ ನಮ್ಮೆಲ್ಲರಿಗೆ ಮಾದರಿಯಾಗಿದ್ದಾರೆ. ಇವರನ್ನು ಸನ್ಮಾನಿಸಿದ್ದಾರೆ ಶ್ರೀಮತಿ ನಾಟೋಳನ ದೇವಮ್ಮ ಮೊಣಪ್ಪನವರು.

**ಶ್ರೀಮತಿ ಅಮ್ಮಾಜಿರ ಲೀಲಾವತಿ ಪೊನ್ನಪ್ಪ :** ಹಾಲಿ ಬೆಂಗಳೂರಿನಲ್ಲಿ ವೈದ್ಯಕೀಯ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಮತ್ತು ಕಾವೇರಿನಾಡು, ಸೃಷ್ಟಿಕರ್ತರು, ಗೌಡ ಸಂಸ್ಕೃತಿಯ ಸಂಗೀತದ ಮಾಧುರ್ಯದಿಂದ ಜನಮನಗಳ ತಣಿಸುತ್ತಿರುವ ಶ್ರೀ ಅಮ್ಮಾಜಿರ ಪೊನ್ನಪ್ಪನವರ ಧರ್ಮಪತ್ನಿ ಆದರದ ಕಾಣಿಕೆ ನೀಡಿ ಗೌರವಿಸಿದ್ದಾ ಶ್ರೀಮತಿ ಪೊನ್ನಚ್ಚನ ಲಲಿತಾಸೋಮಣ್ಣನವರು.

**ಶ್ರೀಮತಿ ತೋಟಂಬೈಲು ಪ್ರೇಮಾ ಆನಂದ್ :** ಜನಾಂ ಮಹಿಳಾಯುವ ಪ್ರತಿಭೆ. ಗೌಡ ಸಾಂಸ್ಕೃತಿಕ ಅಕಾಡೆಮಿ ನಿರ್ದೇಶಕರು, ತಾಲ್ಲೂಕು ಪಂಚಾಯತ್ ಉಪಾಧ್ಯಕ್ಷೆಯಾಗಿ ಸ ಸಲ್ಲಿಸುತ್ತಿದ್ದಾರೆ. ಸಮಾಜಸೇವಕಿ ಇವರನ್ನು ಸನ್ಮಾನಿಸಿದ್ದಾ ಶ್ರೀಮತಿ ಪರಿವಾರ ತಂಗಮ್ಮ ಸೋಮಣ್ಣನವರು.

**ಶ್ರೀಮತಿ ಮೀನಾಕ್ಷಿಗೌಡ :** ನೆರೆ ತಾಲ್ಲೂಕಾದ ಸು ನಿವಾಸಿಯಾಗಿದ್ದು ನಿವೃತ್ತ ಕ್ಷೇತ್ರಾಭಿವೃದ್ಧಿ ಅಧಿಕಾರಿಯಾಗಿರುತ್ತಾ ಉತ್ತಮ ವಾಗ್ಮಿ ಮಾರ್ಗ ದರ್ಶಕರಾಗಿರುತ್ತಾರೆ. ಇವರ ಹಾರ್ದಿಕವಾಗಿ ಸನ್ಮಾನಿಸಿದ್ದಾರೆ ಶ್ರೀಮತಿ ಕಾಳೆರಮ್ಮನ ಸರ ರಾಘವಯ್ಯನವರು.

**ಶ್ರೀಮತಿ ಕೆ. ಪಿ. ಚಂದ್ರಕಲಾ ಪ್ರಸನ್ನ :** ಶ್ರೀಮತಿಯ ಮಾಜಿ ಜಿಲ್ಲಾ ಪರಿಷತ್ ಸದಸ್ಯೆಯಾಗಿ, ಕೊಡಗು ಜಿಲ್ಲಾ ಮಹಿ ಕಾಂಗ್ರೆಸ್ಸ್ ಅಧ್ಯಕ್ಷೆಯಾಗಿ, ಒಕ್ಕಲಿಗರ ಸಮಾಜದ ಕಾರ್ಯದ ಯಾಗಿ ಕೆಲಸ ನಿರ್ವಹಿಸಿದ್ದಾರೆ. ಇವರಿಗೆ ಮಾಲಾರ್ಪಣೆ ಮ ಸನ್ಮಾನಿಸಲಿದ್ದವರು ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ (ಇ ಗೈರು ಹಾಜರಾಗಿದ್ದರು)

**ಶ್ರೀಮತಿ ಕುಯ್ಯಮುಡಿ ಅನಿತಾರಾಣಿ :** ಇತ್ತೀಚೆಗ ಕೊಡಗು ಸಂಗಾತಿ ಮೂಲಕ ಜನಾಂಗಕ್ಕೆ ಗುರುತಿಸಲ್ಪಟ್ಟ ಪ ಪ್ರಥಮ ಚಲನ ಚಿತ್ರ ನಟಿ ಹಾಲಿ ಸುಮಾರು 40ಕ್ಕೂ ಹೆ ಚಿತ್ರಗಳಲ್ಲಿ ನಟಿಸಿದ್ದು ಹಾಲಿ ಚಿತ್ರೀಕರಣವಾಗುತ್ತಿರುವ 'ಏನ್ ಕೊಡವ ಭಾಷೆ' ಚಿತ್ರ ಮತ್ತು ದೂರದರ್ಶನದ ಧಾರಾವಾಹಿಗ ನಟಿಸುತ್ತಿದ್ದಾರೆ. ಬೆಂಗಳೂರಿನ ಎಂ. ಎಸ್. ರಾಮಯ್ಯ ಆಸ್ಪತ್ರೆಯ ಇವರ ಪತಿ ವೈದ್ಯರಾಗಿದ್ದಾರೆ. ಇವರು ಸಹ ಧಾರಾವಾಹಿ ನಟ ಇವರಿಗೆ ಅತಿಥ್ಯದ ಅನುರಾಗ ನೀಡಿ ಸನ್ಮಾನಿಸಲಿದ್ದವರು ಶ್ರೀ ಕೂಡಕಂಡಿ ಕಾವೇರಮ್ಮ ಸೋಮಣ್ಣನವರು (ಇವರು ಗ ಹಾಜರಾಗಿದ್ದರು)

ಆತ್ಮೀಯರೆ, ಎಲೆಮರೆಯ ಕಾಯಂತೆ, ಕಾನನದ ಸುಮ ದುಡಿಯುವ ಸಹೃದಯಿಗಳು, ವಿಚಾರವಾದಿಗಳು, ಆದರ್ಶವಾದಿ ಎಲ್ಲಕ್ಕಿಂತ ಸೇವೆಯಲ್ಲಿ ಸಂತೋಷ ಅನುಭವಿಸುವ ಮಹಾವ ಯರು ಅನೇಕರಿದ್ದಾರೆ. ಈ ಒಕ್ಕೂಟದ ಇಂತಹ ಸಮಾರಂಭ ಅವರನ್ನು ಗುರುತಿಸಲು ಮುಂದೆ ಖಂಡಿತ ಸಹಾಯ ಆಗಬಹು ಆತ್ಮೀಯ ಕರೆಗೆ ಓಗೊಟ್ಟು ಹೆಚ್ಚಿನ ರೀತಿಯಲ್ಲಿ ಸಹಕಾರ ನೀಡಿ ಇವರ ಈ ಸಂಘಟನೆಯ ಭದ್ರ ಅಡಿಪಾಯದೊಂ ಬೃಹದಾಕಾರವಾಗಿ ಬೆಳೆಯುವುದರಲ್ಲಿ ಸಂದೇಹವಿಲ್ಲ. ಸನ್ಮಾನಿಸ ಅತಿಥಿಗಳಿಗೂ ಸನ್ಮಾನಿಸಿದ ಒಕ್ಕೂಟದ ಪದಾಧಿಕಾರಿಗಳಿ ಪ್ರೋತ್ಸಾಹಿಸಿದ ಸರ್ವರಿಗೂ ಧನ್ಯವಾದಗಳು.

* * * * * * * * * * * * * * * * * * * *

# ೊಡಗಿನ ಗೌಡರು ವಲಸೆ ಬಂದವರಲ್ಲ.

ಲೇಖನ : ಎಸ್. ಎಸ್. ದೇವಿಪ್ರಸಾದ್, ಸಂಪಾಜೆ

- ಗೌಡ ಜನಾಂಗದವರನ್ನು ವಲಸೆ ಬಂದವರೆಂದು ಗುರುತಿಸುವುದು ಅವಮಾನ. ಇದನ್ನು ಅಲ್ಲಗಳೆಯಲು ಈ ಕೆಳಗಿನ ಆಧಾರಗಳಿಂದ ೀಖನವನ್ನು ಸಿದ್ಧಗೊಳಿಸಲಾಗಿದೆ.

## ಗ್ರಂಥ ಋಣ


. ಕರ್ನಾಟಕ ಚರಿತ್ರೆ - ಪ್ರೊ. ಬಿ. ಷೇಕ್ ಅಲಿ,
2. ಗಜೆಟಿಯರ್ ಆಫ್ ಕೂರ್ಗ್ - ರೆ. ಜಿ. ರಿಕ್ತರ್
. ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ - ತಿ. ತಾ. ಶರ್ಮ
4. ಐಗೂರು ಇತಿಹಾಸ - ನಿಡುಗೆರೆ ಲಕ್ಷ್ಮೀನರಸಿಂಹ ಶಾಸ್ತ್ರಿ
. ಲಿಂಗರಜನ ಹುಕುಂನಾಮೆ - ಡಾ. ಪುರುಷೋತ್ತಮ ಬಿಳಿಮಲೆ
6. ಕೊಡಗಿನ ಇತಿಹಾಸ - ಡಿ. ಎನ್. ಕೃಷ್ಣಯ್ಯ
. ಪಟೋಲೆಪಳಮೆ - ನಡಿಕೇರಿಯಂಡ ಚಿಣ್ಣಪ್ಪ
8. ರಾಜೇಂದ್ರನಾಮೆ
. ಕದ್ರಿಕ್ಷೇತ್ರ ಚರಿತ್ರೆ -ದೇವಸ್ಥಾನ ಆಡಳಿತ ಮಂಡಳಿ
10. ಸುಬ್ರಹ್ಮಣ್ಯಕ್ಷೇತ್ರ ಚರಿತ್ರೆ - ದೇವಸ್ಥಾನ ಆಡಳಿತ ಮಂಡಳಿ
. ಮೆಕೆಂಜಿ ಕೈಫಿಯತ್ತುಗಳು - ಪುರುಷೋತ್ತಮ ಬಿಳಿಮಲೆ
12. ಸಿರಿ - ಅಮೃತ ಸೋಮೇಶ್ವರರ ಅಭಿನಂದನಾ ಗ್ರಂಥ
. ಶೀನಪ್ಪ ಹೆಗ್ಗಡೆ ಸಮಗ್ರಸಾಹಿತ್ಯ
14. ಸ್ಥಾನಿಕ ಬ್ರಾಹ್ಮಣರು - ಐ. ಕೆ. ಶ್ರೀನಿವಾಸರಾವ್
. ದಿ ಇಂಪಿರಿಯಲ್ ಗಜೆಟಿಯರ್ ಆಫ್ ಇಂಡಿಯ
16. ಭಾರತದ ಗ್ಯಾಸೆಟಿಯರ್ ಕರ್ನಾಟಕ ರಾಜ್ಯ ಕೊಡಗು ಜಿಲ್ಲೆ
. ಎಂ. ಲೆವಿನನ ವರದಿ.
18. 1837ರ ನ್ಯಾಯಾಂಗ ಸೂಚಿ


## ಇತರ ಆಧಾರಗಳು

ಶಿರಾಡಿ ಭೂತದ ಪಾಡ್ದನ
2. ಬಚ್ಚನಾಯಕನ ಪಾಡ್ದನ
ಉಳಾಕುಳು ಪಾಡ್ದನ
4. ಪುರಷ ಭೂತದ ಪಾಡ್ದನ
ಸಿದ್ದವೇಷದ ಹಾಡು
6. ಜಾನಪದ ಕತೆಗಳು
ಶುಭ, ಅಶುಭ ಮತ್ತು ಹಬ್ಬಗಳ ಆಚರಣೆ ಪದ್ಧತಿ

ಮೇಲಿನ ಆಧಾರಗಳನ್ನು ಸಮಾಜದ ಹಿರಿಯರಿಂದ ಬೇರೆ, ಬೇರೆ ಪ್ರದೇಶ ಜಾನಪದ ಕಲಾವಿದರಿಂದ ಸಂಗ್ರಹಿಸಿ ಕ್ಷೇತ್ರ ಕಾರ್ಯದಲ್ಲಿ ನುಭವಿಗಳೊಂದಿಗೆ ಚರ್ಚಿಸಿ ಈ ಲೇಖನದಲ್ಲಿ ಬಳಸಿಕೊಳ್ಳಲಾಗಿದೆ.

### ೊಡಗಿನ ಗೌಡರು ವಲಸೆ ಬಂದವರಲ್ಲ.

ಒಂದು ಪ್ರದೇಶದಲ್ಲಿ ಜನಸಂಖ್ಯೆ ನಾನಾ ಕಾರಣಗಳಿಂದಾಗಿ ಚ್ಚಾಗುತ್ತದೆ ಅಥವಾ ಕಡಿಮೆಯಾಗುತ್ತದೆ. ಸಾಂಕ್ರಾಮಿಕ ರೋಗ ಥವಾ ಬರಗಾಲ ಕಾಣಿಸಿಕೊಂಡರೆ ಅಲ್ಲಿಂದ ದೊಡ್ಡ ಸಂಖ್ಯೆಯಲ್ಲಿ ನರು ವಲಸೆ ಹೋಗುತ್ತಾರೆ. ಆದರೆ ಒಂದು ಪ್ರದೇಶಕ್ಕೆ ಜನರನ್ನು ಲಸೆ ಬರುವಂತೆ ಮಾಡುವುದು ಯಾವುದೇ ರಾಜನಿಂದ ಸಾಧ್ಯವಾಗದ ಚಾರ. ಸಾಮಾನ್ಯವಾಗಿ ಪ್ರತಿಯೊಂದು ಕುಟುಂಬವೂ ಅದರ ಸದಸ್ಯ ಮ್ಮಿಂದ ದೂರ ಹೋಗಿ ನೆಲಸುವುದನ್ನು ಇಚ್ಚಿಸುವುದಿಲ್ಲ. ಈಗಿನ ಂಪರ್ಕ ಸಾಧನಗಳಿಂದ ಇಡೀ ಪ್ರಪಂಚವೇ ಸಣ್ಣ ಹಳ್ಳಿಯಾಗಿದೆ. ದರೆ ಸಂಚಾರ ಸಂಪರ್ಕಗಳ ಸಾಧನಗಳು ತೀರ ಮಿತವಾಗಿದ್ದ ಹಿಂದಿನ ಾಲದಲ್ಲಿ, ಒಂದು ರಾತ್ರಿ ಒಂದು ಹಗಲು ನಡೆದು ತಲುಪ ಹುದಾಗಿದ್ದ ದೂರವನ್ನೇ ವಿವಾಹ ಉದ್ಯೋಗ ಇತ್ಯಾದಿಗಳ ಂದರ್ಭದಲ್ಲಿ ಆಯ್ದುಕೊಳ್ಳುತ್ತಿದ್ದರು. ಹಾಗೆ ಒಂದು ಸಾಂಸ್ಕೃತಿಕ ಟಕದ ಹೊರವಲಯದಲ್ಲಿ ಹೋಗಿ ನೆಲೆಸಲು ಯಾರೂ ಇಷ್ಟಪಡುತ್ತಿರಲಿಲ್ಲ.

ಕೊಡಗಿಗೆ ಗೌಡ ಜನಾಂಗದವರು ವಲಸೆ ಬಂದವರೆ? ಎನ್ನುವ ಚಾರವನ್ನು ಈ ಹಿನ್ನಲೆಯಲ್ಲಿ ವಿಮರ್ಶಿಸಬೇಕು. ಈಗ ಗೌಡ ಜನಾಂಗವೆಂದು ಗುರುತಿಸಲ್ಪಡುವ ಒಕ್ಕಲಿಗ ಸಮಾಜದ ಒಂದು ಒಳ ಪಂಗಡ - ದಕ್ಷಿಣ ಕನ್ನಡ, ಕೊಡಗು ಮತ್ತು ಕೇರಳದ ಕಾಸರಗೋಡು ಜಿಲ್ಲೆಗಳಲ್ಲಿ ದಟ್ಟವಾಗಿ ನೆಲೆ ನಿಂತಿದೆ. ಹೀಗೆ ನೆಲೆ ನಿಂತಿರುವ ಗ್ರಾಮಗಳು ಒಂದನ್ನೊಂದು ಅಂಟಿಕೊಂಡಿವೆ. ಒಂದು ಜನಾಂಗದ ಜನರು ಕೃಷಿಗೆ ಅನುಕೂಲವಾದ ಭೂಮಿಯನ್ನು ಹುಡುಕಿ ಸ್ವಾಧೀನ ಮಾಡಿಕೊಂಡು - ಕಾಡನ್ನು ಕಡಿದು ನಾಡಾಗಿಸುತ್ತ ಪಸರಿಸುವ ಪ್ರಕ್ರಿಯೆಯನ್ನು ವಲಸೆ ಹೋಗುವುದೆಂದು ಕರೆಯುವಂತಿಲ್ಲ. ಹಾಗೆಯೇ ನಾನಾ ಕಾರಣಗಳಿಂದಾಗಿ ರಾಜ್ಯದ ಗಡಿಗಳು ಅಥವಾ ಜಿಲ್ಲೆಯ ಗಡಿಗಳು ಬದಲಾದಾಗ ಗಡಿಯೊಳಗೆ ಸೇರಿದವರನ್ನು ಹೊರಗಿನಿಂದ ವಲಸೆ ಬಂದವರು ಎನ್ನುವುದು ಸರಿಯಲ್ಲ. ಹಾಗೊಂದು ವೇಳೆ ಹೇಳುವುದಾದರೆ, ಇನ್ನು ಕೆಲ ವರ್ಷಗಳ ಬಳಿಕ ಕಾಸರಗೋಡು ಜಿಲ್ಲೆಯಲ್ಲಿರುವ ಗೌಡರನ್ನು ಕನ್ನಡ ಜಿಲ್ಲೆಯಿಂದ ವಲಸೆ ಬಂದವರೆಂದು ಹೇಳಬೇಕಾದೀತು.

ಟಿಪ್ಪು ಸುಲ್ತಾನನ ಧಾಳಿಯಿಂದಾಗಿ ಕೊಡಗಿನ ಜನಸಂಖ್ಯೆ ಕಡಿಮೆಯಾಗಿ ಜಮೀನು ಪಾಳುಬಿತ್ತು. ಆಗ ಕೊಡಗಿನ ರಾಜ ಕನ್ನಡ ಜಿಲ್ಲೆಯಿಂದ ಗೌಡರನ್ನು ಕರೆಸಿಕೊಂಡ ಎಂಬ ಮಾತು ಈಗ ವಾಡಿಕೆಯಾಗಿದೆ. ಒಂದು ಸುಳ್ಳನ್ನು ಹತ್ತು ಸಲ ಹೇಳಿದರೆ ಕ್ರಮೇಣ

ಜನರು ಅದನ್ನೇ ಸತ್ಯವೆಂದು ನಂಬುವುದ ಸಹಜ. ಅದನ್ನು ಸತ್ಯವೆಂದು ನಂಬಿದ ಜನ ಅದನ್ನೇ ಬೇರೆಯವರಿಗೆ ಹೇಳತೊಡಗುತ್ತಾರೆ. ಇದು ಐತಿಹ್ಯಗಳು ಹುಟ್ಟಿಕೊಳ್ಳುವ ರೀತಿ. ಇದಕ್ಕೆ ಚರಿತ್ರೆಯ ಆಧಾರ ಬೇಡ. ದಾಖಲೆಗಳ ಆಶ್ರಯವೂ ಬೇಡ. ಸತ್ಯಾಸತ್ಯಗಳ ವಿಮರ್ಶೆಗೆ ಇಲ್ಲಿ ಅವಕಾಶ ಇಲ್ಲ. ನಮಗೇ ಗೊತ್ತಿಲ್ಲದೆ, ಅಸತ್ಯದ ಪ್ರಚಾರದಲ್ಲಿ ನಾವೂ ಸಿಕ್ಕಿಕೊಳ್ಳುತ್ತೇವೆ. ಇದು ನಮ್ಮ ಜನಾಂಗಕ್ಕೆ ಅವಮಾನ ಎನ್ನುವುದು ನಮಗೇ ಗೊತ್ತಿಲ್ಲ !

ಕೊಡಗಿನ ಬಗ್ಗೆ ಆಂಗ್ಲರು ತೋರಿಸಿದ ಅತೀ ಆಸಕ್ತಿಯನ್ನು, ನಮ್ಮ ದೇಶದ ಬೇರೆ ಯಾವುದೇ ಭೂ ಪ್ರದೇಶದ ಬಗ್ಗೆ ಅವರು ತೋರಿಸಿದ್ದು ಕಂಡುಬರುವುದಿಲ್ಲ. ಕೊಡಗಿನ ಚರಿತ್ರೆ ಬರೆದ ಆಂಗ್ಲರ ಪಟ್ಟಿಯನ್ನು ನೋಡಿದರೆ'ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ' ಎನ್ನುವ ಹಾಗೆ ಆಗಿದೆ. ಕೊನ್ನೇರ್, ಮೋಗ್ಲಿಂಗ್, ವಿಲ್ಕ್ಸ್, ರೈಸ್, ಬುಕಾನನ್, ಅಬರ್‌ಕ್ರಾಂಬಿ, ಫ್ರೇಜರ್, ಹಂಟರ್, ಥಾರ್ನ್‌ಟನ್, ರಿಕ್ತರ್ ಮೊದಲಾದವರೆಲ್ಲ ಕೊಡಗಿನ ವಿಚಾರಗಳನ್ನು ಸಂಗ್ರಹಿಸಿ, ಸಂಗ್ರಹಿಸಿ ಪುಟಗಟ್ಟಲೆ ಬರೆದು ರಾಶಿ ಹಾಕಿದ್ದಾರೆ !

ಎಲ್ಲಾ ಇತಿಹಾಸಕಾರರೂ ಒಪ್ಪಿಕೊಳ್ಳುವ ಪ್ರಕಾರ 1785ರಲ್ಲಿ ಕೊಡಗಿನಿಂದ ಟಿಪ್ಪು ಸುಲ್ತಾನ ದೊಡ್ಡ ಸಂಖ್ಯೆಯಲ್ಲಿ ಜನರನ್ನು ಶ್ರೀರಂಗ ಪಟ್ಟಣಕ್ಕೆ ಕೊಂಡೊಯ್ದ. ಇದನ್ನು ಟಿಪ್ಪು ಸುಲ್ತಾನನ ಚರಿತ್ರೆಕಾರರೂ ಬರೆದಿಟ್ಟಿದ್ದಾರೆ. ಆದರೆ ಕೊಡಗಿನ ರಾಜ ಕನ್ನಡ ಜಿಲ್ಲೆಯಿಂದ ಗೌಡರನ್ನು ತರಿಸಿದನೆಂದು ಯಾರೂ ಬರೆದಿಲ್ಲ. ಆಗ ಕೊಡಗು ಟಿಪ್ಪುವಿನ ಆಳ್ವಿಕೆ ಯಲ್ಲಿದ್ದು, ಆತನ ಅಮಲ್ದಾರನಾದ ನಾಗಪ್ಪಯ್ಯನ ಉಸ್ತುವಾರಿ ಯಲ್ಲಿತ್ತು. "ಆಂಧ್ರದ ಆದವಾನಿಯಿಂದ ರೈತರನ್ನು ತರಿಸಿ ಪಾಳುಬಿದ್ದ ಜಮೀನಿನ ಬೇಸಾಯಕ್ಕೆ ವ್ಯವಸ್ಥೆ ಮಾಡಿದರು" - ಎಂಬುದಾಗಿ ಚರಿತ್ರೆಕಾರರು ದಾಖಲಿಸಿದ್ದಾರೆಯೇ ಹೊರತು, ಯಾವನೊಬ್ಬ ಇತಿಹಾಸಕಾರನೂ ಸಹ ಕನ್ನಡ ಜಿಲ್ಲೆಯಿಂದ ಗೌಡರನ್ನು ತರಿಸಿದ್ದಾಗಿ ಬರೆದಿಲ್ಲ. ದೊಡ್ಡ ವೀರರಾಜ ನಾಲ್ಕುನಾಡು ಅರಮನೆಯಲ್ಲಿ ಪಟ್ಟಾಭಿಷೇಕ ಮಾಡಿಸಿಕೊಂಡದ್ದು 1796ರಲ್ಲಿ. ಹತ್ತು ವರ್ಷಗಳ ಹಿಂದೆ ಅವನು ಜೈಲಿನಲ್ಲಿದ್ದನೆಂದು ಎಲ್ಲಾ ಇತಿಹಾಸಕಾರರೂ ಒಪ್ಪಿಕೊಂಡಿದ್ದಾರೆ. ಅವನು ಜೈಲಿನಲ್ಲಿದ್ದುಕೊಂಡೇ ಕನ್ನಡ ಜಿಲ್ಲೆಯಿಂದ ಗೌಡರನ್ನು ಕರೆಸಿಕೊಂಡನೆ? ಈ ಎಲ್ಲಾ ವಿಚಾರಗಳ ಕುರಿತು ವಸ್ತುನಿಷ್ಠವಾದ ಚರ್ಚೆ ನಡೆಯಬೇಕಾಗಿದೆ.

ಇತಿಹಾಸಕಾರರು ಬರೆದ ದಾಖಲೆಗಳನ್ನು ಆಧಾರವಾಗಿಟ್ಟುಕೊಂಡು, ಕರ್ನಾಟಕ ಸರ್ಕಾರವು ಡಾ. ಸೂರ್ಯನಾಥ ಕಾಮತರ ಪ್ರಧಾನ ಸಂಪಾದಕತ್ವದಲ್ಲಿ 1992ರಲ್ಲಿ ಪ್ರಕಟಿಸಿದ 'ಗ್ಯಾಸೆಟಿಯರ್ ಕೊಡಗು ಜಿಲ್ಲೆ'; ಇದರ ಪುಟ 66-67ಗಳಲ್ಲಿ ಈ ರೀತಿ ಬರೆದಿದ್ದಾರೆ. "10ನೇ ಶತಮಾನಕ್ಕೆ ಮೊದಲು ಗುಡ್ಡ ಬೆಟ್ಟಗಳಿಂದ ದುರ್ಗಮವಾದ ಪ್ರದೇಶವಾಗಿದ್ದ ಕೊಡಗು, ಬೆಟ್ಟ ಕುರುಬರು, ಜೇನು ಕುರುಬರು, ಯರವರು ಮುಂತಾದ ಬುಡಕಟ್ಟು ಜನರಿಂದ ತುಂಬಿದ್ದು, ಇದೇ ಕಾಲಖಂಡದಲ್ಲಿ 'ಕೊಡವರು' ಈಗ ಕೂರ್ಗ್ಸ್ ಎಂದು ಪರಿಚಿತರಾದ ಜನಾಂಗದವರೂ, ಗೌಡ ಜನಾಂಗದವರೂ ಇಲ್ಲಿ ನೆಲೆನಿಂತರು. ' ಹೇಗಿದ್ದೂ ಗಂಗ, ಚೋಳರ ಆಳ್ವಿಕೆಯ ಕಾಲದಲ್ಲಿ ಇಂದಿನ ಕೊಡಗಿನ ಪ್ರದೇಶದ ಜನಸಂಖ್ಯೆ 20-25 ಸಾವಿರ ಮೀರಿರಲಾರದು.'

ಮೇಲಿನ ಮಾತುಗಳನ್ನು ಸಮರ್ಥವಾಗಿ ನಿರೂಪಿಸುವ ಕೆಳಗಿನ ಆಧಾರಗಳನ್ನು ಗಮನಿಸಬೇಕು.

**ಐತಿಹಾಸಿಕ ಪುರಾವೆಗಳು :** ಕನ್ನಡ ನಾಡಿನ ಅತ್ಯಂತ ಪ್ರಾಚೀ ರಾಜವಂಶ ಹಾಗೂ ಅದನ್ನು ದೀರ್ಘಕಾಲ ಆಳಿದ ದಾಖಲೆ ಗಂ ವಂಶದ್ದಾಗಿದೆ. ಬೆಂಗಳೂರು ಕಟ್ಟಿದ ಮಾಗಡಿ ಕೆಂಪೇಗೌಡ ಇದ ವಂಶದ ಕುಡಿ. ಒಕ್ಕಲಿಗರಲ್ಲಿ ಗಂಗಡಿಕಾರರೆಂದು ಗುರುತಿಸಲ್ಪಡುವವ ತಮ್ಮ ಮೂಲವನ್ನು ಗಂಗವಾಡಿ ಎಂಬುದಾಗಿ ಗುರುತಿಸಿಕೊಂಡಿದ್ದಾ ಕ್ರಿ. ಶ. ಮೂರನೆ ಶತಮಾನದಿಂದ ಹತ್ತನೇ ಶತಮಾನದವರೆಗ ಪ್ರಬಲರಾಗಿದ್ದ ಗಂಗರು ಅನಂತರ ಪ್ರಾಬಲ್ಯ ಕಳೆದುಕೊಂಡಂತೆ ಕಂ ಬರುತ್ತದೆ. ಉತ್ತರಭಾರತದಲ್ಲಿ ಹುಟ್ಟಿ ದಕ್ಷಿಣದ ಕಡೆ ಬಂದ ಜೈ ಮತವನ್ನು ಪ್ರಚಾರ ಮಾಡುವಲ್ಲಿ ಗಂಗರು ಪ್ರಮು ಪಾತ್ರವಹಿಸಿದವರು.

**ಬ್ರಿಟಿಷರ ಕಾಲದ ಚಾರಿತ್ರಿಕ ಪುರಾವೆಗಳು :** ಐಗೂರಿ ಅರಸರು ಟಿಪ್ಪು ಸುಲ್ತಾನನನ್ನು ಬೆಂಬಲಿಸಿದ್ದರು. 1799ರಲ್ಲಿ ಶ್ರೀರಂ ಪಟ್ಟಣವು ಪತನಗೊಂಡ ಮೇಲೆ ಆತನ ಬೆಂಬಲಿಗರು ಬ್ರಿಟಿಷ ವಿರೋಧಿಗಳಾಗಿಯೇ ಮುಂದುವರಿದರು. 10-2-1802 ರ ವೆಂಕಟಾದ್ರಿನಾಯಕನನ್ನು ಮೋಸದಿಂದ ಸೆರೆಹಿಡಿದು ಗಲ್ಲಿಗೇರಿಸಿದರು ಆತನ ರಾಜ್ಯಕ್ಕೆ ಸೇರಿದ್ದ ಬೆಳ್ತಂಗಡಿ ಬಂಟ್ವಾಳ, ಪುತ್ತೂರು ಮತ್ತ ಸೋಮವಾರ ಪೇಟೆ ತಾಲ್ಲೂಕುಗಳನ್ನು ಕೊಡಗಿಗೆ ಸೇರಿಸಿದರು. ಆ ಕೊಡಗು ಇನ್ನು ಕೂಡಾ ಒಂದು ಸಾಂಸ್ಕೃತಿಕ ಘಟಕವಾಗಿರಲಿಲ್ಲ ಈಗಿನ ಕೊಡಗು 1834ರಲ್ಲಿ ಬ್ರಿಟಿಷರು ಅವರ ಆಡಳಿತ ಅನುಕೂಲತೆಗಾಗಿ ನಿರ್ಮಿಸಿದ್ದಾಗಿದೆ. ಐಗೂರು ರಾಜ್ಯವನ್ನು ಮೂ ತುಂಡು ಮಾಡಿ, ಒಂದನ್ನು ಮೈಸೂರು ರಾಜ್ಯಕ್ಕೂ ಇನ್ನೊಂದನ ಮದ್ರಾಸ್ ರಾಜ್ಯಕ್ಕೂ ಸೇರಿಸಿ ತಮ್ಮನ್ನು ಬೆಂಬಲಿಸಿದ ಪ್ರದೇಶವಾ ಕೊಡಗನ್ನು ಪ್ರತ್ಯೇಕ ರಾಜ್ಯವಾಗಿ ಇಟ್ಟುಕೊಂಡು ತಮ ಬೇಕಾದವರನ್ನು ಸೈನ್ಯದ ಉನ್ನತ ಪದವಿಕೊಟ್ಟು ಬೆಳೆಸತೊಡಗಿದರ ತಮ್ಮ ವಿರೋಧಿಗಳನ್ನು ನಾನಾ ವಿಧದಲ್ಲಿ ಅವರ ಜೀವನಮ ಕೆಳದರ್ಜೆಗೆ ಇಳಿಯುವಂತೆ ಮಾಡಿದರು. 113 ವರ್ಷಗಳ ಬ್ರಿಟಿಷ ಆಳ್ವಿಕೆಯಲ್ಲಿ ವಿದ್ಯೆ, ಶ್ರೀಮಂತಿಕೆ, ಪದವಿಗಳಲ್ಲಿ ಅವರ ಬೆಂಬಲಿಗ ಮತ್ತು ಅವರ ವಿರೋಧಿಗಳಲ್ಲಿ ಅಜಗಜಾಂತರ ವ್ಯತ್ಯಾ ಕಾಣಿಸಿಕೊಂಡಿತು. ಬ್ರಿಟಿಷರು ಹೋಗಿ ಅರ್ಧಶತಮಾನದ ಕೊಡಗಿನೊಳಗೆ ಸಾಕಷ್ಟು ಏರುಪೇರುಗಳಾಗಿರುವುದು ಗಮನಾರ್ಹ ಇದನ್ನು ಬ್ರಿಟಿಷ್ ಬೆಂಬಲಿಗರಿಗೆ ಸಹಿಸಲು ಸಾಧ್ಯವಾಗದಿರುವುದ ಬೇಸರದ ವಿಚಾರ.

**ದೇಶೀಯ ಐತಿಹಾಸಿಕ ಪುರಾವೆ :** ಕೊಡಗಿನ ಚರಿತ್ರೆಯ ಗ್ರಂ ರಾಜೇಂದ್ರನಾಮೆ 1807ರಲ್ಲಿ ದೊಡ್ಡ ವೀರರಾಜ ಇದನ್ನು ಬರೆಸಿ ಎನ್ನಲಾಗಿದೆ. ಆದರೆ ಅದೇ ವರ್ಷ ಆತನ ಪತ್ನಿ ಮಹದೇವಮ್ಮಾ ಮೃತಳಾಗಿ ಆತನಿಗೆ ಹುಚ್ಚು ಹಿಡಿದಿತ್ತು ! ಈ ರಾಜೇಂದ್ರ ನಾಮೆಯ ಮೂರು ಶತಮಾನಗಳ ಹಿಂದಿನ ಆತನ ವಂಶಸ್ಥರ ಚರಿತ್ರೆಯನ ಸಂಗ್ರಹಿಸಿ ಬರೆಯಲಾಗಿದೆ. ಇದಕ್ಕೆ ಆಧಾರಗಳೇನು? ಇದನ ನಂಬಬಹುದೆ? ಇದುವರೆಗೆ ಇದನ್ನು ಯಾರೂ ಯಾಕೆ ಪ್ರಶ್ನಿಸಿಲ್ಲ ಎಲ್ಲ ಇತಿಹಾಸಕಾರರೂ ರಾಜೇಂದ್ರನಾಮೆಯನ್ನೇ ಆಧಾರವಾಗಿಟ್ಟು ಕೊಂಡು ಕೊಡಗಿನ ಚರಿತ್ರೆಯನ್ನು ಬರೆದಿದ್ದಾರೆ. ಇದು ಸರಿಯೇ?

ನಿಜವಾದ ಕೊಡಗಿನ ಚರಿತ್ರೆ ಪ್ರಾರಂಭವಾಗುವುದು 92ರಲ್ಲಿ. ಅಂದರೆ ಬ್ರಿಟಿಷರು ಟಿಪ್ಪುಸುಲ್ತಾನನಿಂದ ಒಪ್ಪಂದದ ನರ ಕೊಡಗನ್ನು ಪಡೆದುಕೊಂಡಮೇಲೆಯೇ. ಅದೇ ವರ್ಷ ರಂಗಪಟ್ಟಣ ಮತ್ತು ತಲಚೇರಿ ನಡುವೆ ದಟ್ಟ ಕಾಡಿನ ಮಧ್ಯೆ ರರಾಜ ಪೇಟೆಯ ರಚನೆಯಾಗುವುದು. 1788ರ ಡಿಸೆಂಬರ್ ನ್ಯದರಂದು ಅಂದರೆ ಮೂರು ವರ್ಷಗಳ ಹಿಂದೆ ಕೊಡಗಿನ ಸವಂಶದ ವೀರರಾಜೇಂದ್ರ ಆತನ ಹೆಂಡತಿ, ಮಗು ಮತ್ತು ಇಬ್ಬರು ಮ್ಮಂದಿರೊಡನೆ ಪಿರಿಯಾಪಟ್ಟಣದ ಸೆರೆಮನೆಯಿಂದ ತಪ್ಪಿಸಿ ಂಡಿದ್ದಾನೆಂದು ಕತೆ ಕಟ್ಟಲಾಯಿತು. ಬ್ರಿಟಿಷರ ಪರವಾಗಿ ಸಹಾಯ ಡುತ್ತಿದ್ದ 'ವೀರರಾಜೇಂದ್ರ' ಎಂಬಾತನಿಗೆ 'ನಾಲ್ಕುನಾಡು ಅರಮನೆ' ಬ ಒಂದು ಸಾಮಾನ್ಯ ದರ್ಜೆಯ ಮನೆ ಕಟ್ಟಿ ಅಲ್ಲಿ ಆತನಿಗೆ ಟ್ಟಾಭಿಷೇಕ ಮಾಡುತ್ತಾರೆ. ಈ ವೀರರಾಜನ ಉತ್ಪತ್ತಿ ಏನಿತ್ತು? ರ್ಷಿಕ ಕಂದಾಯ ಎಂಟುಸಾವಿರ ಕಂಠಿರಾಯಿ ಪಗೋಡಗಳನ್ನು ಪ್ಪತ್ನಾಲ್ಕು ಸಾವಿರ ರೂಪಾಯಿಗಳು) ಈತ ಬ್ರಿಟಿಷರಿಗೆ ಯಾವ ಾಲದಿಂದ ಕೊಡುತ್ತಿದ್ದ? ಅಷ್ಟೇ ಅಲ್ಲ, 40 ಲಕ್ಷ ರೂಪಾಯಿ ನ್ನು ಈಸ್ಟ್ ಇಂಡಿಯಾ ಕಂಪೆನಿಯಲ್ಲಿ ಠೇವಣಿಯಾಗಿ ಇಡುವುದು ವನಿಗೆ ಹೇಗೆ ಸಾಧ್ಯವಾಯಿತು? ಇದರೊಂದಿಗೆ ಟಿಪ್ಪುವನ್ನು ಪ್ರಜೆಗಳು ರಸ್ಕರಿಸುವಂತೆ ಮಾಡಲು 'ತುರ್ಕರ ದಂಡು' ಎಂಬ ಹೆಸರಿನಲ್ಲಿ ಳ್ಳಿಗಳನ್ನು ಕೆಲವರು ಲೂಟಿ ಮಾಡುತ್ತಿದ್ದುದೂ ದಾಖಲಾಗಿರುವುದನ್ನು ಲ್ಲಿ ಗಮನಿಸಬೇಕು. ಇದು ಟಿಪ್ಪುವಿನ ಹೆಸರು ಕೆಡಿಸಲು ಇಂಗ್ಲೀಷ್‌ರ ತೆ ಸೇರಿ ವೀರರಾಜೇಂದ್ರ ಹೂಡಿದ ಹೂಟ ಇರಬಹುದೆ?

ಶ್ರೀರಂಗಪಟ್ಟಣದಲ್ಲಿ ರೆಸಿಡೆಂಟ್ ಆಗಿದ್ದ ಕರ್ನಲ್ ವಾರನ್ ಲೋಸ್ ಎಂಬಾತ ವೀರರಾಜನಿಗೆ 16-11-1799ರಂದು ಒಂದು ತ್ರ ಬರೆಯುತ್ತಾನೆ. ಇದರಿಂದಾಗಿ ದೊಡ್ಡ ವೀರರಾಜನು ಸುಮಾರು ,000 ಮಂದಿ ದರೋಡೆಗಾರರ ಕೂಟದ ಮುಖ್ಯಸ್ಥನಾಗಿದ್ದ ಎನ್ನುವ ಂಶಯ ಮೂಡುತ್ತದೆ. ಆ ಪತ್ರದಲ್ಲಿ ವೀರರಾಜನು ಮಹಾರಾಜ ದುರ್ಗಜಿಲ್ಲೆಯನ್ನು ಕೊಳ್ಳೆಹೊಡೆದಿ[illegible]ವುದಾಗಿಯೂ, ಪತ್ರದೊಂದಿಗೆ ಕೊಳ್ಳೆಹೊಡೆದಿದ್ದ ವಿವರಗಳ ಪಟ್ಟಿಯನ್ನು ಕೊಟ್ಟಿರುವುದಾಗಿಯೂ ಬರೆಯಲಾಗಿದೆ. ಈ ಕೊಳ್ಳೆ ಪಟ್ಟಿಯಲ್ಲಿ 67 ಹುಡುಗಿಯರು, 34 ಗಂಡಸರು, 11 ಹುಡುಗರು, 10 ಹುಡುಗಿಯರು, 1383 ಹಸುಗಳು, 574 ಕೋಣಗಳು, 834 ಎತ್ತುಗಳು, ಬೆಳ್ಳಿ ಬಂಗಾರ ಬಟ್ಟೆಗಂಟು, ದವಸ ಧಾನ್ಯ ಇತ್ಯಾದಿ ವಿವರಗಳಿವೆ. ವಿಚಿತ್ರವೆಂದರೆ ವೀರರಾಜ ಇದನ್ನು ಸಂಪೂರ್ಣವಾಗಿ ನಿರಾಕರಿಸುವುದಿಲ್ಲ. 67 ಜನ ಹೆಂಗಸರಲ್ಲಿ ಕೆಲವರು ಓಡಿ ಹೋಗಿರುವುದಾಗಿಯೂ, ಕೆಲವರು ಸತ್ತು ಹೋಗಿರುವುದಾಗಿಯೂ, ಉಳಿದ ಕೆಲವರನ್ನು ಇಲ್ಲಿಯವರು ಮದುವೆ ಯಾಗಿರುವುದರಿಂದ ಅವರನ್ನು ಬಿಟ್ಟುಕೊಡುವಂತೆ ಒತ್ತಾಯಿಸಲು ಸಾಧ್ಯವಿಲ್ಲವೆಂದೂ ಉತ್ತರಿಸುತ್ತಾನೆ! ಜತೆಗೆ ಟಿಪ್ಪು ಸುಲ್ತಾನ ದೊಡ್ಡ ಸಂಖ್ಯೆಯಲ್ಲಿ ಇಲ್ಲಿಯವರನ್ನು ಶ್ರೀರಂಗಪಟ್ಟಣಕ್ಕೆ ಕೊಂಡೊಯ್ದು ಕೊಡಗಿನವರಿಗೆ ಮದುವೆಯಾಗಲು ಹೆಂಗಸರ ಕೊರತೆಯಿರುವುದಾಗಿ ಹೇಳಿಕೊಂಡಿದ್ದಾನೆ. ಅಂದಿನ ನೈಜಚಿತ್ರಣ ತಾ. 16-12-1799ರಲ್ಲಿ ಬರೆದ ದೊಡ್ಡ ವೀರರಾಜನ ಪತ್ರದಲ್ಲಿದೆ. ಆತ ತನ್ನೊಂದಿಗೆ ಇರುವವರ ಸಂಖ್ಯೆಯನ್ನು 6,000 ಅಥವಾ 7,000 ಎಂದು ಕೂಡಾ ಹೇಳಿಕೊಂಡಿದ್ದಾನೆ.

**ಜನಪದ ಮೂಲದ ಪುರಾವೆಗಳು :** ಗೌಡ ಜನಾಂಗದವರು ಈಗ ವಾಸವಿರುವ ಪ್ರದೇಶದಲ್ಲಿ ಸಾವಿರಾರು ವರ್ಷಗಳ ಹಿಂದೆಯೇ ವಾಸಿಸುತ್ತಿದ್ದರೆಂಬುದಕ್ಕೆ ಇತಿಹಾಸದಲ್ಲಿ ಆಧಾರಗಳಿವೆ. ಅಲ್ಲದೆ ಭೂತಾರಾಧನೆಯಲ್ಲಿ ಸಿಗುವ ಪಾಡ್ದನಗಳು ಕೂಡಾ ಸಾಕಷ್ಟು ಮಾಹಿತಿಗಳನ್ನು ಒದಗಿಸುತ್ತವೆ. ಅವುಗಳನ್ನು ಇಲ್ಲಿ ಪ್ರಸ್ತಾವಿಸಲಾಗಿದೆ.

**ಪೂಮಾಣಿ - ಕಿನ್ನಿಮಾಣಿ :** ಇವರಿಬ್ಬರು ದಕ್ಷಿಣ ಕನ್ನಡದ ಪ್ರಖ್ಯಾತ ಐತಿಹ್ಯ ಪುರುಷರು. ಈಗ ಭೂತಗಳಾಗಿ ಆರಾಧನೆ ಗೊಳಗಾಗಿದ್ದಾರೆ. ಜೈನ ಗುರು ಸಿಂಹಾನಂದಿಯು ಈ ಸಹೋದರರಲ್ಲಿ ಹಿರಿಯವನಿಗೆ ಹೂವಿನ ಕಿರೀಟವನ್ನು ತೊಡಿಸಿದ ಕಾರಣ ಪೂ (ಹೂವು), ಮಾಣಿ (ಮಹನೀಯ), ಕಿರಿಯವನು ಕಿನ್ನಿ (ಚಿಕ್ಕ), ಮಾಣಿ (ಮಹನೀಯ) - ಎಂಬುದಾಗಿ ತುಳುನಾಡಿನಲ್ಲಿ ಗುರುತಿಸಲ್ಪಡುತ್ತಾರೆ. ಇವರ ದಿಗ್ವಿಜಯ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮ ಗೌಡನನ್ನು ಜೈನರನ್ನಾಗಿಸಿರಬೇಕು. ಹಿಂದೆ ಪ್ರತಿ ಗ್ರಾಮದ ಮುಖ್ಯಸ್ಥರನ್ನು ಗೌಡ ಎಂದು ಗುರುತಿಸುತ್ತಿದ್ದು, ಈ ಪದ್ಧತಿಯನ್ನು ಗೌಡಾಳಿತನವೆಂದು ಕರೆಯುತ್ತಿದ್ದರು. ಉತ್ತರ ಕರ್ನಾಟಕದಲ್ಲಿ ವಕ್ಕಲಿಗ ಜನ ಲಿಂಗಾಯತರಾಗಿ ಬದಲಾದ ಮೇಲೆಯೂ ಗ್ರಾಮ ಗೌಡಿಕೆ ಮಾಡಿದವರ ಕುಟುಂಬದವರು ತಮ್ಮ ಹೆಸರಿನೊಂದಿಗೆ 'ಗೌಡ' ಜೋಡಿಸಿಕೊಳ್ಳುವುದೂ ಮುಂದುವರಿದಿದೆ. ವೈಷ್ಣವ, ಶೈವರಲ್ಲಿನ ಭಿನ್ನಾಭಿಪ್ರಾಯದಿಂದಾಗಿ ವಕ್ಕಲಿಗ ಸಮುದಾಯದಿಂದ ವೀರಶೈವರು ಬೇರೆಯಾದರು. ಲಿಂಗರಾಜನ ಹುಕುಂ ನಾಮೆಯಲ್ಲಿಯೂ ಗ್ರಾಮದ ಮುಖ್ಯಸ್ಥನನ್ನು ಗ್ರಾಮ ಗೌಡನೆಂದು ಬರೆಯಲಾಗಿದೆ. 'ತಕ್ಕ' ಎನ್ನುವುದು ಕೊಡವ ಭಾಷೆಯಲ್ಲಿ 'ಗೌಡ' ಎನ್ನುವುದರ ಪರ್ಯಾಯ ಪದ. ಗ್ರಾಮ ಗೌಡನಿಗೆ ಕಂದಾಯರಹಿತವಾಗಿ ಕೊಟ್ಟ ಭೂಮಿಯನ್ನು 'ಗೌಡ ಉಂಬಳಿ' ಎಂದು ಲಿಂಗರಾಜನ ಹುಕುಂ ನಾಮೆಯಲ್ಲಿ ಉಲ್ಲೇಖಿಸಲಾಗಿದೆ.

**ಉಳ್ಳಾಕುಲು :** ಗಂಗ ರಾಜಕುಮಾರರು ಕನ್ನಡ ಜಿಲ್ಲೆಯ ಗೌಡರನ್ನು ಜೈನರನ್ನಾಗಿ ಮಾಡುತ್ತಾ ಮುಂದುವರಿದು ಕೊನೆಗೆ ಸುಬ್ರಹ್ಮಣ್ಯದಲ್ಲಿ ದೇವಸ್ಥಾನದ ಧ್ವಜಸ್ತಂಭವನ್ನು ಭಗ್ನಗೊಳಿಸುತ್ತಾರೆ. 1837ರ ಅಮರ ಸುಳ್ಯ ದಂಗೆಯತನಕ ಈ ದೇವಸ್ಥಾನದ ಮೊಕ್ತೇಸರಿಕೆ ಕೂಜುಗೋಡು ಕಟ್ಟೆಮನೆ ಕುಟುಂಬದವರಿಗೆ ಸೇರಿತ್ತು. ಯುದ್ಧದಲ್ಲಿ ಪೂಮಾಣಿ ಕಿನ್ನಿ ಮಾಣಿ ಸೋತಿರಬೇಕು. ಧ್ವಜಸ್ತಂಭ ತುಂಡರಿಸಿದ ತಪ್ಪಿಗೆ ಜಾತ್ರೆಯಲ್ಲಿ ಅನ್ನ ಮಾಡುವ ದೊಡ್ಡ ಕೊಪ್ಪರಿಗೆ ಒಪ್ಪಿಸುತ್ತಾರೆ. ಅಂದರೆ ಸಂಧಾನ ನಡೆದಿದೆ ಎಂದರ್ಥ. ಅದೇ ಕೊಪ್ಪರಿಗೆಯಲ್ಲಿ ಅನ್ನ ಮಾಡಿ ಅದರಲ್ಲಿ ಸಟ್ಟುಗ ಇಡುವುದು ಜಾತ್ರೆಯ ಕೊಡಿ ಏರುವುದಕ್ಕೆ ಪರ್ಯಾಯವಾಗಿ ಈಗಲೂ ನಡೆದು ಬರುತಿದೆ ಇತರ ದೇವಸ್ಥಾನಗಳಂತೆ ಸುಬ್ರಹ್ಮಣ್ಯ ಜಾತ್ರೆಯಲ್ಲಿ ಕೊಡಿ ಏರಿಸುವ ಪದ್ಧತಿ ಇಲ್ಲ ಎಂಬುದನ್ನು ಗಮನಿಸಬೇಕು.

ಯುದ್ಧದಲ್ಲಿ ಸೋತವರೂ ತಮ್ಮ ಜನಾಂಗದವರೆಂದು ಮಾತುಕತೆಯ ಸಂದರ್ಭದಲ್ಲಿ ಗೊತ್ತಾಗಿರಬಹುದು. ಹಾಗಾಗಿ ಅವರನ್ನು ಗೌರವದಿಂದ ನೋಡಿಕೊಂಡಿರಬೇಕು. ಮುಂದೆ ಈ

ಪ್ರದೇಶದ ಗೌಡರು ಅವರನ್ನು ಉಳ್ಳಾಕುಳು ಎಂದು ಕರೆಯುತ್ತಾ ಕುಲದೇವರಾಗಿ ಆರಾಧಿಸಿರಬೇಕು. ಕೆಲವು ಕುಟುಂಬಗಳು ಈ ಭೂತಗಳನ್ನು ಇಂದಿಗೂ ಆರಾಧಿಸುತ್ತಾರೆ. ಇವರ ಪಾಡ್ದನಗಳ ಅಧ್ಯಯನದ ಆಧಾರದಲ್ಲಿ ಚರಿತ್ರೆಯನ್ನು ಪುನಾ ರಚಿಸಬೇಕಾಗಿದೆ.

**ಪುರುಷ ಭೂತ ಮತ್ತು ಸಿದ್ಧವೇಷ :** ಕಂದ್ರಪಾಡಿ ಅಥವಾ ಕಿನ್ನರಿ ಪಾಡಿಯಲ್ಲಿ ಉಳ್ಳಾಕುಳ ಜೊತೆ ಯುದ್ಧವಾಗಿ ಪುರುಷರು ಸೋತರೂ, ಅವರೊಳಗೆ ಸ್ನೇಹ ಉಳಿದ ಕೊಂಡ ಬಗ್ಗೆ ತಿಳಿಯುತ್ತದೆ. ಒಂದು ಕಾಲ ಘಟ್ಟದಲ್ಲಿ ಜೈನರು ಮತ್ತೆ ವೈಷ್ಣವರಾಗಿ, ಮತ್ತೆ ಕೆಲವರು ಶೈವರಾದುದಕ್ಕೆ ಇಂದಿಗೂ ಕೆಲವರು ವಿಭೂತಿ ಧಾರಣೆ ಮಾಡಿದ ಬಳಿಕ ತುಳಸಿ ಕಟ್ಟೆಗೆ ನೀರೆರೆಯುವುದು ದ್ಯೋತಕವಾಗಿದೆ. ಹರಿಸೇವೆಯನ್ನು ಮಾಡಿದ ಬಳಿಕ ಕೆಂಚರಾಯ ಸೇವೆಯನ್ನು ಮಾಡಲೇಬೇಕೆಂಬುದು ವಾಡಿಕೆ. ಕೆಂಚರಾಯ ಅಂದರೆ ಕಾಲಭೈರವ. ಆದಿಚುಂಚನಗಿರಿ, ಕದ್ರಿ ಮಠ, ವಿಟ್ಲ ಮಠ, ಗುರುಪುರ ಮಠ ಇತ್ಯಾದಿ ಇಂದಿಗೂ ನಮ್ಮ ಜನಾಂಗದವರ ಮೇಲೆ ಪ್ರಭಾವ ಬೀರಿದೆ. ಇವುಗಳೆಲ್ಲ ನಾಥ ಪಂಥದ ಮಠಗಳು. ಪುರುಷ ಭೂತ ನಾಥ ಪಂಥದ ಜೋಗಿ. ನಾಲ್ವರು ಅಣ್ಣತಮ್ಮಂದಿರು ತಮ್ಮ ಹಿರಿಯರು ಹೇಳಿದ ಹರಕೆಯನ್ನು ಸಲ್ಲಿಸಲು ಉಡುಪಿಯ ಮಾರ್ಗವಾಗಿ ತಲಕಾವೇರಿಗೆ ಹೋದುದನ್ನು ಪಾಡ್ದನದಲ್ಲಿ ಹೇಳಲಾಗಿದೆ. ತಮ್ಮನ್ನು ಪುರುಷರ ಮಕ್ಕಳು ಎಂದು ಕರೆದುಕೊಳ್ಳುತ್ತಾ ಗೌಡರು ಜಾತ್ರೆಯ ಸಂದರ್ಭದಲ್ಲಿ ಸಿದ್ಧವೇಷವೆಂಬ ಜಾನಪದ ನೃತ್ಯಕೂಟವನ್ನು ಸಂಘಟಿಸಿ ಮನೆ ಮನೆಗೆ ಹೋಗಿ ಪ್ರದರ್ಶನ ನೀಡುವುದು ಇಂದಿಗೂ ಉಳಿದು ಬಂದಿದೆ. ಆದಕಾರಣ ಆದಿಚುಂಚನಗಿರಿಯ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರನ್ನು 1985ರ ಗೌಡ ಸಮ್ಮೇಳನದಲ್ಲಿ ಕುಲಗುರುಗಳಾಗಿ ಸ್ವೀಕರಿಸಲಾಗಿದೆ. ತಿರುಪತಿ ವೆಂಕಟರಮಣ, ಶ್ರೀ ಶೃಂಗೇರಿ ಮಠಗಳ ಪ್ರಭಾವವು ಒಂದು ಕಾಲದಲ್ಲಿ ಕುಂಠಿತವಾಯಿತು. ಸಿದ್ಧವೇಶದಲ್ಲಿ ಬ್ರಾಹ್ಮಣನನ್ನು (ಶೃಂಗೇರಿ) ದಾಸಯ್ಯನನ್ನು (ತಿರುಪತಿ) ಅಂಗಳದ ಸುತ್ತ ಓಡಿಸುವುದರಲ್ಲಿ ಇದು ಪ್ರಕಟಗೊಂಡಂತೆ ತೋರುತ್ತದೆ.

**ಬಚ್ಚನಾಯಕ :** ಕಾಗಿನೆರೆ ದೊಡ್ಡಣ್ಣ ಗೌಡರ ಮಗ ಬಚ್ಚನಾಯಕ ಕಿನ್ನರಿಘಟ್ಟ ಇಳಿದು ಬರುವುದು, ಪುರುಷ ಸಹೋದರರಲ್ಲಿ ಒಬ್ಬನ ಶಿಷ್ಯನಾಗಿ ಯುದ್ಧ ವಿದ್ಯೆಗಳನ್ನು ಕಲಿಯುವುದು, ಐಗೂರು ಸೀಮೆಯೊಂದಿಗೆ ಈ ಪ್ರದೇಶದವರಿಗಿದ್ದ ಬಾಂಧವ್ಯದ ಬಗೆಗೆ ಸಾಕಷ್ಟು ಆಧಾರಗಳನ್ನು ಕೊಡುತ್ತದೆ. ಹೊಸಳಿಗೆ ಅಮ್ಮ; ಹೊಸಕೋಟೆ ಕೆಂಚಮ್ಮ, ವಣಗೂರು ಸುಬ್ಬಮ್ಮ ಮೊದಲಾದ ಕುಲದೇವರ ಮೂಲ ದೇವಸ್ಥಾನಗಳು ಘಟ್ಟದ ಮೇಲೆ ಇರುವುದು ಸಂಶೋಧಕರಿಗೆ ಸಹಾಯಕವಾಗುವ ಅಂಶಗಳಾಗಿವೆ.

**ಕೊಡಗಿನ ದೇವತೆಗಳು :** ಪಟ್ಟೋಲೆ ಪಳಮೆಯಲ್ಲಿರುವಂತ ಹದಿನೇಳು ದೇವತೆಗಳು ಏಳು ಸಮುದ್ರಗಳ ಆಚೆಯಿಂದ ಬರುತ್ತವೆ. ಕಣ್ಣೂರಿಗೆ ಬಂದು ಅಲ್ಲಿ ತೀಯ ಮಕ್ಕಳ ಕಳ್ಳುವಾಸನೆ, ಮುಕ್ಕ ಮಕ್ಕಳ ಮೀನುವಾಸನೆ ಸಹಿಸಲಾರದೆ ಅಲ್ಲಿಂದ ದೇವನೆಲೆ ಹುಡುಕುತ್ತಾ ಹೊರಡುತ್ತವೆ. ಕಾಇರಾಟಪ್ಪ, ಬೆಂದ್ರ್‌ಕೋಲಪ್ಪ, ತಿರ್‌ಚಂಬರಪ್ಪ, ತಿರುನೆಲ್ಲಿ ಪೆಮ್ಮಯ್ಯ ಕೇರಳದಲ್ಲಿ ನೆಲೆಸುತ್ತಾರೆ. ಇ[illegible]ಪ್ಪ, ಪಾಲೂರಪ್ಪ, ಪನ್ನಂಗಾಲತ್ತಮ್ಮೆ ಕೊಡಗಿಗೆ ಬಂದು ನೆಲೆಸಿದರೆಂ ಏಳು ದೇವಮಕ್ಕಳ ಹಾಡಿನಲ್ಲಿದೆ. ಐದು ದೇವ ಮಕ್ಕಳ ಹಾಡಿನ ಪ್ರಕ - ಮತ್‌ಲಪ್ಪ ಪುತ್‌ಲಮ್ಮೆ, ಒಗೆರಲಪ್ಪ ಮತ್ತು ರುದ್ರಗುಪ್ಪೆಲವ ಎಂಬ ಸಹೋದರಿಯರು ಕೊಡಗಿಗೆ ಬರುತ್ತಾರೆ. ಮೂರು ದೇ ಮಕ್ಕಳ ಹಾಡಿನಲ್ಲಿ ಮದೇರಪ್ಪ, ಅಪ್ಪಂಗಿರಿಯಪ್ಪ ಹಾಗ ಹೊರಮಲೆನಾಡು ಭಗವತಿ, ಇಬ್ಬರು ದೇವ ಮಕ್ಕಳ ಹಾಡಿನ ಕಾಕೋಟ್ ಅಚ್ಚಯ್ಯ ಮತ್ತು ಅಕ್ಕವ್ವ. ಈ ಎಲ್ಲ ಹದಿನೇ ದೇವತೆಗಳು ಕಾವೇರಿ ಮಾತೆಯಲ್ಲಿ ತಾವು ಕೊಡಗಿನಲ್ಲಿ ನೆಲೆ ನಿಲ್ಲಲ ಅನುಮತಿ ಪಡೆಯುತ್ತಾರೆ. ಈ ಹದಿನೇಳು ದೇವತೆಗಳಲ್ಲಿ ಹದಿಮೂ ಮಂದಿ ದೇವತೆಗಳು ಹಾಗೂ ಅಯ್ಯಪ್ಪ ಮತ್ತು ನಾಗ ದೇವತೆಗ ಕೊಡಗಿನಲ್ಲಿ ಬಂದು ನೆಲೆಸುವುದಕ್ಕೆ ಮೊದಲೇ ಕೊಡಗಿನ ತಲಕಾವೇರಿ ಮತ್ತು ಭಗಂಡೇಶ್ವರ ದೇವಸ್ಥಾನಗಳಿದ್ದವು ಎಂಬುದ ಪಟ್ಟೋಲೆ ಪಳಮೆಯೇ ಆಧಾರವಾಗುತ್ತದೆ. ತಲಕಾವೇ ದೇವಸ್ಥಾನದ ಮೊಕ್ತೇಸರರು ಗೌಡ ಜನಾಂಗದ ಕೋಡಿ ಮನೆಯವರು ಭಗಂಡೇಶ್ವರ ದೇವಸ್ಥಾನದ ಮೊಕ್ತೇಸರರು ಬಳ್ಳಡ್ಕ ಎಂಬ ಗೌ ಮನೆತನದವರು. ಇದು ವಂಶ ಪಾರಂಪರ್ಯವಾಗಿ ಸಾವಿರಾ ವರ್ಷಗಳಿಂದ ಮುಂದುವರಿದು ಬಂದಿದೆ. ಹೀಗಾಗಿ ಕೊಡ ಜನಾಂಗದವರ ದೇವತೆಗಳು ಬರುವ ಮೊದಲೇ ಗೌಡರು ಕೊಡಗಿನಲ್ಲಿ ನೆಲೆಸಿದ್ದರು ಎನ್ನುವುದನ್ನು ಒಪ್ಪಿಕೊಳ್ಳಬೇಕಾಗುತ್ತದೆ.

**ಭಾಷೆ :** ಈಗ ಹತ್ತುಕುಟುಂಬ ಹದಿನೆಂಟು ಗೋತ್ರದವರೆಂದ ಗುರುತಿಸಲ್ಪಡುವ ಜನರ ಮಾತೃಭಾಷೆಯ ಕುರಿತು ವಿಮರ್ಶಿಸೋಣ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕಾಸರಗೋಡು ಜಿಲ್ಲೆಗಳಲ್ಲಿ ಗೌಡ ಮನೆಮಾತು 'ಅರೆಬಾಸೆ' (ಗೌಡ ಕನ್ನಡ) ಹಾಗೂ ತುಳು. ಸುಳ್ ತಾಲ್ಲೂಕು ಮತ್ತು ಮಡಿಕೇರಿ ತಾಲ್ಲೂಕುಗಳಲ್ಲಿ ಹೆಚ್ಚಿನವರು ಅರೆಭಾಷೆಯನ್ನೇ ಮನೆಮಾತಾಗಿ ಉಳಿಸಿಕೊಂಡಿದ್ದಾರೆ. ಪುತ್ತೂರು, ವಿಟ್ಲ, ಬಂಟ್ವಾಳ ಮತ್ತು ಬೆಳ್ತಂಗಡಿ ತಾಲ್ಲೂಕುಗಳಲ್ಲಿ ಅಧಿ ಸಂಖ್ಯೆಯಲ್ಲಿ ತುಳು ಮಾತೃಭಾಷೆಯಾಗಿರುವ ಗೌಡರನ್ನು ಕಾಣಬಹುದು. ಹಾಗೆಯೇ ಕೊಡಗು ಮತ್ತು ದಕ್ಷಿಣಕನ್ನಡ ಜಿಲ್ಲೆಗಳಲ್ಲಿ ಕನ್ನಡವನ್ನೇ ಮನೆಮಾತಾಗಿ ಇಟ್ಟುಕೊಂಡಿರುವವರು ಸಾಕಷ್ಟು ಸಂಖ್ಯೆಯಲ್ಲಿ ಇದ್ದಾರೆ. ಇದಕ್ಕೆ - ಮದುವೆಯಾದ ಗಂಡು ಹೆಣ್ಣುಗಳಿಗೆ ಪರಸ್ಪರರ ಭಾಷೆ ಗೊತ್ತಿಲ್ಲದೆ ಇದ್ದದ್ದು ಅಥವಾ ಅದರಲ್ಲಿ ಪರಿಣತಿ ಇಲ್ಲದೇಇದ್ದುದು ಕಾರಣವಾಗಿರಬೇಕು. ತಮ್ಮ ಮನೆಯ ಆಸುಪಾಸಿನಲ್ಲಿ ಅರೆಭಾಷೆ ಮಾತನಾಡುವ ಯಾರೂ ಇಲ್ಲದ್ದರಿಂದಾಗಿ ತಮ್ಮ ಮಕ್ಕಳಿಗೆ ಶುದ್ಧ ಕನ್ನಡ ಕಲಿಸಿದವರೂ ಇದ್ದಾರೆ. ಬೆರಳೆಣಿಕೆಯಷ್ಟು ಮಂದಿ ಕೊಡವ ಭಾಷೆಯನ್ನು ಸ್ವೀಕರಿಸಿದವರೂ ಇದ್ದಾರೆ. ಐಗೂರ ಅರಸರು ಆಳುತ್ತಿದ್ದ ಪ್ರದೇಶದಲ್ಲಿ, ಜನ ಸಂಪರ್ಕ ಕಡಿಮೆ ಇರುವಲ್ಲಿ - ಅರೆಭಾಷೆಗೆ ಬಹಳ ಹತ್ತಿರವೆನ್ನಿಸುವ ಮನೆಮಾತು ಈಗಲೂ ಉಳಿದು ಬಂದಿದೆ.

— ಮುಂದಿನ ಸಂಚಿಕೆ ನೋಡಿ




✦ ಕೌಂಡಿನ್ಯ

ಧಾರವಾಹಿ -8

ಇಲ್ಲಿಯವರೆಗೆ..................................

ಮೀನಳ ಮನೆ ಸಂಪಿಗೆಪುರದ ದೇವಸ್ಥಾನದ ಹತ್ತಿರ ಇರುತ್ತದೆ. ಅಲ್ಲಿಗೆ ರೇವತಿ ಬರುತ್ತಾಳೆ. ಆದರೆ ಗೆಳತಿ ಮೀನ ಸತ್ತಿದ್ದಾಳೆ ಅನ್ನೋ ಸಂಗತಿ ಗೊತ್ತಾಗುತ್ತದೆ. ಆ ಮನೆಗೆ ಯುವಕ ಪೂಜಾರಿ ಬರುತ್ತಾನೆ. ಅವನಿಂದ ಮೀನಳ ಸಾವಿನ ಘಟನೆಯ ಭಯಾನಕ ವಿವರಣೆ ದೊರೆಯುತ್ತದೆ.

ಮುಂದೆ ಓದಿ...............

ಅಲ್ಲಿ...... ಅಲ್ಲಿ ನಿಶ್ಯಬ್ದತೆ ನೆಲೆಸಿದೆ!

ಅವರುಗಳು ಮಾತಾಡುತ್ತಿಲ್ಲ !

ಅದು ಮೀನಳ ಮನೆ! ಅವಳ ಸಹೋದರ ಶ್ರೀಕಂಠ ಮತ್ತು ಅಜ್ಜಿ ದುಃಖದಿಂದ ಅಳುತ್ತಾ ನಿಂತಿದ್ದಾರೆ.

ಅಲ್ಲಿ ಯುವಕ ಪೂಜಾರಿ ನಿಂತಿದ್ದಾನೆ !

ಸಾವಿನ ವಿವರಣೆ ಹೇಳುತ್ತಿದ್ದಾನೆ !

ಅವಳ ಬಾಯಿಂದ ಮಾತುಗಳು ಹೊರ ಬರುತ್ತಿಲ್ಲ !

ಭಯದೊಂದಿಗೆ ಅತ್ಯಾಶ್ಚರ್ಯ !

ಇದೇನಿದು ಈ ಪೂಜಾರಿ ಚಂದಾ ಮಾಮದ ರೋಚಕ ಕತೆಯನ್ನು ಹೇಳುತ್ತಿದ್ದಾನಲ್ಲ. ಅದು....... ಅದು ಹೇಗೆ ಸಾಧ್ಯ?

ಮೀನ ಹಾವು ಕಡಿದು ಸತ್ತಿದ್ದಾಳೆ ಎಂದಿದ್ದರೆ ನಂಬಬಹುದಿತ್ತು. ಆದರೆ ಇವರು ಹೇಳುತ್ತಿರುವುದೇನು?

ಮೀನಳ ದೇಹದ ತುಂಬಾ ಹತ್ತಾರು ಹಾವುಗಳು ಒಂದು ಗಂಟೆಯ ಕಾಲ ಸುತ್ತಿಕೊಂಡಿತ್ತು ಅನ್ನುತ್ತಿದ್ದಾನೆ!

ಇದನ್ನು ನಂಬಲು ಸಾಧ್ಯವೆ?

ಇವಳ ಮನಸ್ಸಿನ ಭಾವನೆಗಳನ್ನು ಅರ್ಥ ಮಾಡಿಕೊಂಡವನಂತೆ ಪೂಜಾರಿ "ನಂಬಿಕೆ ಬರುತ್ತಿಲ್ಲವೆ !"

ಇಲ್ಲವೆಂಬಂತೆ ತಲೆಯಾಡಿಸಿದಳು.

ಆಗ ಶ್ರೀಕಂಠ ಗಂಭೀರವಾಗಿ "ನಂಬಲೇ ಬೇಕು, ಯಾಕೆ ಅಂದರೆ ಇದನ್ನು ನಾನೇ ಕಣ್ಣಾರೆ ನೋಡಿದ್ದೇನೆ !"

ರೇವತಿ ಭಯಾಶ್ಚರ್ಯದಿಂದ ನೋಡಿದಳು !

"ಶ್ರೀಕಂಠ ಮಾತ್ರ ಅಲ್ಲ. ಇಡೀ ಊರಿನ ಜನಗಳೇ ಹಾಡು ಹಗಲಿನಲ್ಲಿ ಈ ಭಯಾನಕ ದೃಶ್ಯ ಕಂಡಿದ್ದಾರೆ!" ಎಂದು ಯುವಕ ಪೂಜಾರಿ ಗಂಭೀರವಾಗಿ ಹೇಳಿದನು.

ಈಗ ನಂಬಲೇಬೇಕು !

ಊರಿನ ಜನಗಳೆಲ್ಲಾ ಮಾತು ಸುಳ್ಳು ಹೇಳುತ್ತಾರೆ? ಆದರೆ ಇದು......... ಇದು ಹೇಗೆ ಸಾಧ್ಯ?

ರೇವತಿ ತನ ಸಂದೇಹವನ್ನು ಈಗ ಈ ಪೂಜಾರಿಯ ಹತ್ತಿರ ಹೇಳಿಕೊಂಡಳು.

ಅವನು ತಲೆಯಾಡಿಸುತ್ತಾ "ಸದಾ ಸರ್ಪವನ್ನು ಕೊರಳಿನಲ್ಲಿ ಸುತ್ತಿಕೊಂಡಿರುವ ಈಶ್ವರನನ್ನು ಪೂಜಿಸುತ್ತಿರುವ ನನಗೆ ಈ ನಿಗೂಢತೆ ಅರ್ಥವಾಗಿಲ್ಲ."

ರೇವತಿ ತಟ್ಟನೆ ಅವನತ್ತ ನೋಡಿದಳು

ತುಂಬು ಪ್ರಾಯದ ಯುವಕ ಈ ಪೂಜಾರಿಯು ಗೆಟ್‌ಅಪ್‌ನ್ನು. ವೇದಾಂತಿಯಂತೆ, ವೈರಾಗಿಯಂತೆ ಮಾತಾಡುತ್ತಿದ್ದಾನೆ !

ಎಲ್ಲೋ.... ಏನೋ ಅಸಹಜತೆ ಇದೆ !

ಅದೇನೆಂದು ಗೊತ್ತಾಗುತ್ತಿಲ್ಲ. ರೇವತಿಗೆ !

ಯುವಕ ಪೂಜಾರಿ "ಅಮ್ಮಾ........ ರೇವತಿ....... ಸಂಜೆಯ ಪೂಜೆಗೆ ವೇಳೆಯಾಗುತ್ತಿದೆ ' ನಾನು ಬರುತ್ತೇನೆ. ದೇವಸ್ಥಾನಕ್ಕೆ ಬಂದು ಈಶ್ವರನ ದರ್ಶನ ಮಾಡು"

ರೇವತಿ ತಲೆಯಾಡಿಸಿದಳು !

ತಲೆಯಲ್ಲಿ ಅನುಮಾನದ ರೇಖಾಗಣಿತ !

ಯುವಕ ಪೂಜಾರಿ ಹೋದ ನಂತರ ರೇವತಿ "ನನಗೆ....... ನನಗೆ ಮೀನಳ ಸಾವಿನ ಬಗ್ಗೆ ಸಮಾಧಾನ ಉಂಟಾಗಲಿಲ್ಲ"

ಅಜ್ಜಿ ಅಳುತ್ತಲೇ "ಊರಿನವರೆಲ್ಲಾ ಕಣ್ಣಾರೆ ಕಂಡಿರುವಾಗ ಸಂದೇಹ ಪಡಲು ಇನ್ನೇನವ್ವ ಉಳಿಯುತ್ತದೆ!"

"ಹಾಗಲ್ಲ ಅಜ್ಜೀ........"

"ನೋಡಮ್ಮ...... ನೀನು ಮನಸ್ಸು ಕೆಡಿಸಿ ಕೊಳ್ಳಬೇಡ. ಕೈ ಕಾಲು ಮುಖ ತೊಳೆದು ಕೊಂಡು ದೇವಸ್ಥಾನಕ್ಕೆ ಹೋಗಿ ಬಾ. ಅಡುಗೆ ಮಾಡಿರುತ್ತೇನೆ. ಊಟ ಮಾಡುವಿಯಂತೆ."

ರೇವತಿ ತಲೆಯಾಡಿಸಿದಳು.

ಸಂಜೆ ಆರು ಗಂಟೆ !

ಗೋಧೂಳಿಯ ಸಮಯ.

ಮೇಯಲು ಹೋಗಿದ್ದ ಜಾನುವಾರುಗಳು ಹಿಂತಿರುಗುತ್ತಿರುವಾಗ ಮಣ್ಣಿನ ನೆಲದಿಂದ ಧೂಳು ಬರುತ್ತಿದೆ !

ಸೂರ್ಯ ಪಶ್ಚಿಮದಲ್ಲಿ ಇಳಿಯುತ್ತಿದ್ದಾನೆ.

ಆಗಸದಲ್ಲಿ ತಂಪು ಛಾಯೆ ಹರಡಿದೆ !

ಶ್ರೀಕಂಠನ ಜೊತೆ ರೇವತಿ ಮನೆಯ ಎದುರಿಗೇ ಇದ್ದ ದೇವಸ್ಥಾನಕ್ಕೆ ಬಂದಳು. ಗಂಟೆಯ ಶಬ್ದ ಕೇಳಿ ಬರುತ್ತಿದೆ !

ಅದರೊಂದಿಗೆ ಮಂತ್ರ !

ಪಾಳೆಯಗಾರರ ಕಾಲದ ಕಲ್ಲಿನ ಕಟ್ಟಡ. ದೇವಸ್ಥಾನದ ಪ್ರಾಂಗಣ ತುಂಬಾ ಅಗಲವಾಗಿದೆ ! ಮಧ್ಯದಲ್ಲಿ ಗರ್ಭಗುಡಿ !

ಗರ್ಭಗುಡಿಯಲ್ಲಿ ಈಶ್ವರನಿಗೆ ಮುಖ ಮಾಡಿರುವ ನಂದಿಯ ವಿಗ್ರಹ ಕಂಡು ಬಂದಿತು. ಭವ್ಯವಾದ ಈಶ್ವರ ಲಿಂಗ !

ಉರಿಯುತ್ತಿರುವ ನಂದಾ ದೀಪ !

ಯುವಕ ಪೂಜಾರಿ ಗಂಟೆ ಬಾರಿಸುತ್ತಾ ಮಂಗಳಾರತಿಯನ್ನು ಮಾಡುತ್ತಿದ್ದಾನೆ. ಮಂತ್ರ ಕೇಳಿ ಬರುತ್ತಿದೆ.

ಊರಿನ ಕೆಲವು ಮಂದಿ ಬಂದರು.

ಪೂಜೆ ಮುಗಿದು ಮಂಗಳಾರತಿ, ತೀರ್ಥ, ಪ್ರಸಾದ ನೀಡಿದ ನಂತರ "ರೇವತಿ...... ಎಡತೊರೆ ಮನೆಯವರು ಪತ್ರಿಕೆಗಳಲ್ಲಿ

ನೀಡಿರುವ ಜಾಹೀರಾತನ್ನು ಓದಿ ಸೊಸೆಯಾಗಲು ಬಂದಿದ್ದೀಯ?"

ಬೆಚ್ಚಿ ಬಿಟ್ಟಳು ರೇವತಿ !

ಭಯಾಶ್ಚರ್ಯದಿಂದ ನೋಡಿದಳು.

ಯುವಕ ಪೂಜಾರಿ ನಗುತ್ತಾ "ನನಗೆ ಈ ಸಂಗತಿ ಹೇಗೆ ಗೊತ್ತಾಯಿತು. ಅಂತ ನಿನಗೆ ಆಶ್ಚರ್ಯವಾಗುತ್ತಿದೆಯೆ !"

ರೇವತಿ ತಲೆಯಾಡಿಸಿದಳು.

ಯುವಕ ಪೂಜಾರಿ "ನನಗೆ ಮಾತ್ರ ಅಲ್ಲ. ಈ ಊರಿನಲ್ಲಿಯೇ ಪ್ರತಿಯೊಬ್ಬರಿಗೂ ಸಹ ಗೊತ್ತಾಗಿದೆ. ಯಾಕೆ ಅಂದರೆ ಇದು ಸಣ್ಣ ಗ್ರಾಮ. ಇಲ್ಲಿ ಸುದ್ದಿಗೆ ವೇಗ ಜಾಸ್ತಿ"

ರೇವತಿ ಉತ್ತರಿಸಲಿಲ್ಲ.

"ನಿನ್ನ ಅಭಿಪ್ರಾಯ ತಿಳಿಸಿದ್ದೀಯ?"

ರೇವತಿಗೆ ಕೋಪ ಬಂದಿತು. ಈ ಪೂಜಾರಿಗೇಕೆ ನನ್ನ ವೈಯುಕ್ತಿಕ ವಿಚಾರಗಳು? ತೆಪ್ಪಗೆ ಪೂಜೆ ಮಾಡಿಕೊಂಡಿರಬಾರದೆ?

ಯುವಕ ಪೂಜಾರಿ "ದುಡುಕ ಬೇಡ. ಇದೇ ಊರಿನಲ್ಲಿ ಒಂದೆರಡು ದಿನಗಳು ಇರು. ನಂತರ ನಿನ್ನ ನಿರ್ಧಾರವೇನು ಅಂತ ನಿನಗೆ ಗೊತ್ತಾಗದಂತೆ ನೀನು ತಿಳಿಸುತ್ತೀಯಾ?"

ಪೂಜಾರಿ ತಪ್ಪೇನೂ ಹೇಳುತ್ತಿಲ್ಲ. ಮದುವೆ ಎಂಬುದು ಬಹುಮುಖ್ಯ ವಿಚಾರ ಬಾಹ್ಯ ಸೌಂದರ್ಯಕ್ಕೆ ಮರುಳಾಗಿ ಒಪ್ಪಿಕೊಳ್ಳುವಂತದ್ದಲ್ಲ !

ರೇವತಿ ತಲೆಯಾಡಿಸಿದಳು. ರಾತ್ರಿ ಎಂಟು ಗಂಟೆ !

ಹಳ್ಳಿಯಲ್ಲಿ ವಾಸವಾಗಿದ್ದರಿಂದ ಊಟ ಮುಗಿಸಿ ಎಲ್ಲರೂ ಮಲಗಿ ಕೊಂಡಿದ್

ರೇವತಿಗೆ ಅವಳ ಗೆಳತಿ ಮೀ ಕೊಠಡಿಯನ್ನೇ ಬಿಟ್ಟು ಕೊಡಲಾಗಿ ರೇವತಿಗೆ ಮಲಗುವಾಗ ಏನಾದ ಓದಲೇಬೇಕು.

ಮೀನ ಎಂ. ಎ. ಸ್ಟೂಡೆಂಟ್ ರೂಮಿನಲ್ಲಿ ಪುಸ್ತಕಗಳಿಟ್ಟಿದ್ದ ರ್‍ಯಾಕ್ ಇ ಈಗ ಪುಸ್ತಕಗಳನ್ನು ತಡಕಾಡಿ ನೋಡುತ್ತಿದ್

ಒಂದು ಪುಸ್ತಕದಿಂದ ಅದೇನೋ ಜ ಬಿದ್ದಿತು. ರೇವತಿ ಅದನ್ನು ಎತ್ತಿಕೊಂ ನೋಡಿದಳು.

ಶ್ರೀಮಂತ ಯುವಕ ಪ್ರಸನ್ನನ ಪೋಟೋ

(ಮುಂದುವರೆಯುತ್ತ

---

# ಪೂಜೆ ಪ್ರಾರ್ಥನೆ

ಪೂಜೆ ಎಂಬುದೊಂದು ಪುಣ್ಯ ಕಾರ್ಯವೆಂದು ಎಲ್ಲರಿಗೂ ಗೊತ್ತಿದೆ. ಆದರೆ ಯಾರೂ ಸರಿಯಾಗಿ ಅರ್ಥೈಸಿಕೊಂಡಿಲ್ಲ. ಸಾಮಾನ್ಯವಾಗಿ ಪೂಜೆ ಎಂದರೆ ಅತೀ ಸಣ್ಣ ಗಾತ್ರದ ತೆಂಗಿನಕಾಯಿ, ಅತಿ ಚಿಕ್ಕದಾದ ಒಂದೆರಡು ಬಾಳೆಹಣ್ಣು, ಮನೆಯಲ್ಲಿ ಬೆಳೆದ ಹೂವುಗಳಲ್ಲಿ ಒಳ್ಳೇ ಹೂವನ್ನು ಅಲಂಕಾರಕ್ಕಾಗಿ ಬಿಟ್ಟು ಉಳಿದ ಒಂದೆರಡು ಹೂವು, ಅಗ್ಗವಾಗಿ ಸಿಕ್ಕುವ ಸುವಾಸನೆಯಿಲ್ಲದ ಹೊಗೆ ಕಾರುವ ಊದುಬತ್ತಿ, ಒಂದೆರಡು ಆರತಿ ಕರ್ಪೂರ, ಆರತಿ ತಟ್ಟೆಗೆ ಹಾಕಲು ಅತೀ ಕಡಿಮೆ ದರ್ಜೆಯ ಚಿಲ್ಲರೆ ಕಾಸು ಇಷ್ಟನ್ನು ತೆಗೆದುಕೊಂಡು ಹೋಗಿ ಅರ್ಚಕನಿಗೆ ಕೊಟ್ಟು, ಪೂಜೆ ಮಾಡಿಸಿ, ನಮಗೆ ಧನ, ಧಾನ್ಯ, ಅಂತಸ್ತು ಕೊಡೆಂದು ಕೇಳಿಕೊಂಡು ಸಂತೃಪ್ತರಾಗಿ ಹಿಂದಿರುಗುವುದನ್ನು ನಾವೂ ಪೂಜೆಯೆಂದು ಭ್ರಮಿಸುತ್ತೇವೆ.

ಪೂಜೆ ಎಂದರೇನು? ನಮ್ಮಲ್ಲಿರುವ ಎಲ್ಲಾ ಆಲೋಚನೆಗಳು ಹೋಗಬೇಕು. ದೇವನೊಬ್ಬನಲ್ಲದೆ ಉಳಿದ ಭಾವನೆಗಳು ಮಾಯವಾಗಬೇಕು. ತಾಯಿ ತಂದೆಗೆ ತಮ್ಮ ಮಕ್ಕಳ ಮೇಲಿರುವ ಪ್ರೀತಿ, ಗಂಡನಿಗೆ ಹೆಂಡತಿ, ಹೆಂಡತಿಗೆ ಗಂಡನ ಮೇಲಿರುವ ಪ್ರೀತಿ, ಸ್ನೇಹಿತನಿಗೆ ಸ್ನೇಹಿತನ ಮೇಲಿರುವ ಪ್ರೀತಿ, ಈ ಪ್ರೀತಿ, ಪ್ರೇಮವನ್ನೆಲ್ಲಾ ಕ್ರೋಢೀಕರಿಸಿ ದೇವರಿಗೆ ಅರ್ಪಿಸಬೇಕು.

ಮನುಷ್ಯ ಎಲ್ಲಿಯಾದರೂ ಇರಲಿ, ಅವನೊಂದು ನಂಬಿಕೆಯನ್ನು ರೂಢಿಸಿಕೊಳ್ಳಬೇಕು. ಧಾರ್ಮಿಕ ಸ್ವಭಾವವನ್ನು ರೂಢಿಸಬೇಕು. ಪ್ರಾರಂಭಕ್ಕೆ ಒಂದು ಅಂತ್ಯವಿರಲೇಬೇಕು. ಆದಿ ಅಂತ್ಯವಿಲ್ಲದಿರುವುದೇ ದೇವರು. ಬಹುಮುಖ ಪೂಜೆ ಕೆಲವರು ಐಶ್ವರ್ಯಕ್ಕಾಗಿ ದೇವರನ್ನು ಪ್ರೀತಿಸುವರು. ಕೆಲವರು ಮಕ್ಕಳಿಗಾಗಿ ಪೂಜಿಸುವರು. ಕೆಲವರು ತನ್ನ ಗಂಡ ಕುಡುಕನಾಗದಿರಲೆಂದು ಪೂಜಿಸುವರು ಯಾವನೋ ಒಬ್ಬ ಸಾಧು ಚಿನ್ನ ಮಾಡಿ ಕೊಡುತ್ತೇನೆಂದರೆ ಎಲ್ಲರೂ ಅವನ ಹತ್ತಿರ ಓಡಿಹೋಗುವರು. ಅವರೆಲ್ಲರೂ ತಾವು ಭಕ್ತರೆಂದು ಹೇಳಿಕೊಳ್ಳುವರು.

ಮಕ್ಕಳಿಗಾಗಿ ದೇವರನ್ನು ಪೂಜಿಸುವುದು ಭಕ್ತಿ ಅಲ್ಲ. ಸ್ವರ್ಗಕ್ಕಾಗಿ ದೇವರನ್ನು ಪೂಜಿಸುವುದ ಭಕ್ತಿ ಅಲ್ಲ, ನರಕದಿಂದ ಪಾರಾಗಬೇಕೆಂದು ಪೂಜಿಸುವುದು ಭಕ್ತಿ ಅಲ್ಲ, ಭಕ್ತಿ ಅಂಜಿಕೆಯಿಂದ, ಆಸೆಯಿಂದ ಹುಟ್ಟುವುದಿಲ್ಲ. ನಿಜವಾದ ಭಕ್ತಿ "ದೇವರೇ ನನಗೆ ಸುಂದರ ಸತಿ ಬೇಕಾಗಿಲ್ಲ, ಮುಕ್ತಿ ಬೇಕಾಗಿಲ್ಲ. ನಾನು ಎಷ್ಟು ಜನ್ಮ ತಾಳಿದರೂ ಚಿಂತೆಯಿ ಯಾವಾಗಲೂ ನಿನ್ನ ಮೇಲೆ ಅಚಲ ಭಕ್ತಿಯೊಂದನ್ನು ಮಾತ್ರ ಕರುಣಿಸ ಇದೇ ಪ್ರಾರ್ಥನೆ. ಹೃದಯದಲ್ಲಿ ದೇವರ ಪ್ರತಿರೂಪ, ಬಾಯಿಯಲ್ಲಿ ಅ ನಾಮ ಸ್ಮರಣೇ, ಕೈಯಲ್ಲಿ ಕರ್ಮಕಾರ್ಯ ಎಲ್ಲರಲ್ಲಿಯೂ ಒ ದೇವನನ್ನು ಕಾಣು; ಎಲ್ಲವನ್ನೂ ದೇವರಲ್ಲಿ ಕಾಣು. ಇದೇ ಪೂರ್ಣಭ "ಸರ್ವೇ ಜನ ಸುಖಿನೋ ಭವಂತು" ಹೆತ್ತವರ ಚಿತ್ತ ಕೆಡಿಸಿ; ನಿ ಪೂಜೆಯಿಂದೇನು ಫಲ.

"Help ever - Hurt Never"

- ಚೇಂದ್ರಿಮಾಡ. ಗ. ಮುತ್ತಪ್ಪ, ಕುಶಾಲನ

---

13 ನೇ ಪುಟದಿಂದ

ಸಭೆ 2 ಗಂಟೆಗೆ ಮುಗ್‌. ಮಧ್ಯಾಹ್ನದ ಊಟದ ವ್ಯವ ಲಾಯಕ್ಕಿತ್‌. ಇಲ್ಲಿ ಮುಖ್ಯವಾಗಿ ಎಲ್ಲರ ಗಮನಕ್ಕೆ ತಾದೇನ್ ತ್ತೇಳ್ ಈ ದಿನ ಗಂಟ ಕೊಡ್‌ಗ್‌ಲಿ ಗೌಡ ಜನಾಂಗದ ವೀರ ಕ್ರಾಂತಿಕಾ ಸ್ವಾತಂತ್ರ್ಯ ಹೋರಾಟ ಮಾಡ್ಡವ್‌ಕೆ ಸಿಕ್ಕದ ಮರ್ಯಾದಿ ಗೌರವ ಇಂದ್ ಬೆಂಗಳೂರ್ನ್ ಕೆಂಪೆಗೌಡ ನಾಡ್‌ನ ಜಕ್ಕೂರು ಗ್ರಾಮ ಜಾಗಲಿ ಬಡಾವಣೆ ರಸ್ತೆಗಳಿಗೆ ಹೆಸ್ರ್ ಹಾಕಿ ಗ್ಯಾನ ಮಾಡ್ಕಿಂಡ್ ನೀ ಗೌರವ ಸನ್ಮಾನ ನಿಜಕ್ಕೂ ಹೊಗಳು ವಂತದ್ದೇ. ಇದ **ಕೊಡ್‌ಗ್‌ನವುಕೆ** ಒಂದು ರೀತಿಲಿ ಅವಮಾನ ಅಲಾ. ಈ ಎಲಾ ಹೊಗ್‌ಳಿಕೆ ಶ್ರೀ ನಂಗಾರು ನಾಣಯ್ಯನವು ಮತ್ತೆ ಸಹಪಾಠಿಗಳ ಸೇರಕುತ್ತೇಳ್ರೆ ತಪ್ಪಾಕ್ಕಿಲೇ. ಇನ್ನಾದ್ರ್ ಕೊಡ್‌ಗ್‌ನವು ನಿದ್ದೆಂ ಎದ್ದ್. ಈಗನ ಹೋರಾಟಕ್ಕೆ ಬೆಂಬಲ ಕೊಟ್ಟ್ ಸಹಕರ್ಸಿ ಗೌ ವೀರರ್‌ಗೆ ಮಡಿಕೇರ್ಲಿ. ಒಳ್ಳ ಜಾಗಲಿ ಮರ್ಯಾದೆ ಕೊಟ್ಟು ಗೌರವಿಸುವ ಏರ್ಪಾಡ್‌ಗೆ ತಮ್ಮ ತನುಮನ ಧನ ಸಹಾಯಕ್ಕಾ ಕುಲಬಂಧುಗಳಲ್ಲಿ ಕಳಕಳಿಯ ಕೋರಿಕೆ. ಇಂತ ಅವಿಸ್ಮರಣೀಯ ಸಭೆಗೆ ಮತ್ತೆ ಮುಂದೆ ಯಾವುದೇ ಸಭೆ ಸಮಾರಂಭಕ್ಕೆ ಜನಾಂಗದವ ತುಂಬಾ ಬರೋಕುತ ನನ್ನ ವಿನಂತಿ

"ಇಲ್ಲಿ ಸಲ್ಲದವರು ಅಲ್ಲಿ ಸಲ್ಲುವರಯ್ಯ"

ವರದಿ : **ಗುಡ್ಡೆಮನೆ ರಮೇಶ್** ಮಡಿಕೇರಿ

## ಶುಭ ಹಾರೈಕೆ



**ಪನ್ನೇಟಿ ದೇವಯ್ಯ ಮತ್ತು ಪನ್ನೇಟಿ ನೀಲಮ್ಮ**

ಮರಡಿಯೂರು, (ಕೊಪ್ಪ) ಕುಶಾಲನಗರ.

ಇಂದಿಗೆ 50 ಸಂವತ್ಸರಗಳ ಆದರ್ಶ ಮತ್ತು ಮಧುರ ದಾಂಪತ್ಯ ಜೀವನ ನಡೆಸಿರುವ ನಿಮಗೆ ನಮ್ಮ ಹಾರ್ದಿಕ ಶುಭಾಶಯಗಳು.ಮಾನವ ಬಯಸುವುದು ದೀರ್ಘಾಯುಸ್ಸನ್ನು, ಆದರೆ ಮುಪ್ಪನ್ನಲ್ಲ. ಜೀವನವು ಸುಂದರವೂ ಯಶಸ್ವಿಯೂ ಆಗ ಬೇಕಾದರೆ ಪ್ರೀತಿ, ವಿಶ್ವಾಸ, ಜ್ಞಾನ ಮತ್ತು ತ್ಯಾಗದ ಮನೋಭಾವನೆಯ ಆಗರವಾಗಿರಬೇಕು.

ಮಗಳು : **ಕುದುಕುಳಿ ಜಾನಕಿ ಮೂಡಬಿದ್ರೆ ಮತ್ತು ಉಪ್ಪುಂಡಿರ ಗೌರಮ್ಮ (ಟೀ. ನರಸೀಪುರ)**

**ಮೊಮ್ಮಕ್ಕಳು : ಮಧುರ, ದರ್ಶನ್, ಯತೀನ, ಪುನೀತ್**

---

## ಸವಿ ನೆನಪು



**ಕಾಳೇರಮ್ಮನ ಗಣಪತಿ**

ಜನನ : 8-9-1938 ಮರಣ : 15-6-1997

ನೀವು ನಮ್ಮನ್ನಗಲಿದರೂ ನಿಮ್ಮ ನೆನಪು ಚಿರನೂತನ ವಾಗಿಯೇ ಇದೆ. ನಿಮ್ಮ ತ್ಯಾಗ, ಪ್ರೀತಿ, ವಾತ್ಸಲ್ಯಗಳಿಂದ ಕೂಡಿದ ಆದರ್ಶ ಜೀವನ ನಮಗೆ ಮಾರ್ಗದರ್ಶನವು ಹೌದು. ನಿಮ್ಮ ಆತ್ಮಕ್ಕೆ ಅನುದಿನವು ಚಿರಶಾಂತಿಯನ್ನು ಬಯಸುವೆವು.

**ಪತ್ನಿ : ಭಾಗೀರಥಿ, ಮಕ್ಕಳು : ಮೀರ, ನಮಿತಾ,**

ಶಿವನಂಜಪ್ಪ ಬಡಾವಣೆ, ನೆಹರು ನಗರ, ಮಂಡ್ಯ - 571401

ದೂರವಾಣಿ : 08232/23700

## 3ನೇ ವರ್ಷ ಸವಿ ನೆನಪು



**ಪಟ್ಟೆಮನೆ ಕೃಷ್ಣಪ್ಪ**

ಜನನ : 25-1-1911 ಮರಣ : 20-6-1997

ನೀವು ನಮ್ಮನ್ನಗಲಿದರೂ ಸದಾ ನಿಮ್ಮ ನೆನಪು ನಮ್ಮೆಲ್ಲರ ಮನದಲ್ಲಿ ಹಚ್ಚ ಹಸುರಾಗಿದೆ. ನಿಮ್ಮ ಆತ್ಮಕ್ಕೆ ಕುಲಗುರು ವೆಂಕಟ ರಮಣನು ಸದಾ ಚಿರಶಾಂತಿಯನ್ನು ನೀಡಲಿ ಎಂದು ಪ್ರಾರ್ಥಿಸುವ

**ಪತ್ನಿ : ಅಕ್ಕಮ್ಮ, ಮಕ್ಕಳು : ಜಯರಾಮ್, ಗೋಪಾಲಕೃಷ್ಣ, ಅನಿಲ್‌ಕುಮಾರ್, ಸೊಸೆಯರಾದ : ಯಶೋದಾ, ಅನಿತಾರಾಣಿ, ವನಜ**

**ಮೊಮ್ಮಕ್ಕಳು : ಮಧು ಪೂವಯ್ಯ, ತನುಜ, ನಿಖಿಲಾ ನಾಣಯ್ಯ**

ಗದ್ದೆಹಳ್ಳ, ಸುಂಟಿಕೊಪ್ಪ, ಕೊಡಗು ದೂರವಾಣಿ : 08276/62124

K. R. N. N. - 240

10-01-96 TCI Kar. 09592

ನೋಂದಣಿ : 509/96-97

ದೂರವಾಣಿ : 080/642822

# ಕಾವೇರಿನಾಡು ವಿದ್ಯಾಸಂಸ್ಥೆ (ರಿ.)

[ಕರ್ನಾಟಕ ಸರ್ಕಾರದಿಂದ ಅಂಗೀಕೃತವಾಗಿದೆ]



## ಕಾವೇರಿನಾಡು ವಸತಿ ಆಂಗ್ಲ ಶಾಲೆ

**(ಕಾಡುಕರೇನಹಳ್ಳಿ, ಮಹದೇವಪುರ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಫೋನ್ : 562123)**

### ಅರೆಭಾಷಿಕ ಜನಾಂಗದವರಿಗೊಂದು ಸಂತೋಷದ ಸುದ್ದಿ :

ನಮ್ಮ ವಿದ್ಯಾಸಂಸ್ಥೆಯು 1996ರಲ್ಲಿ ನೋಂದಾಯಿಸಲ್ಪಟ್ಟಿದ್ದು, ಶಿಕ್ಷಣ ಕ್ಷೇತ್ರದಲ್ಲಿ ವಿವಿಧ ಉದ್ದೇಶಗಳನ್ನು ಹಾಗೂ ಗುರಿಯನ್ನು ಹಮ್ಮಿಕೊಂಡಿದೆ. 1997-98ರ ಸಾಲಿನಲ್ಲಿ ಮೊದಲ ವರ್ಷದ ಹೆಜ್ಜೆಯನ್ನು ಮುಂದುವರಿಸಿ 1999-2000ರಲ್ಲಿ 3ನೇ ವರ್ಷಕ್ಕೆ ಕಾಲಿಡುತ್ತಿರುವ ವಿಷಯವನ್ನು ನಿಮಗೆ ತಿಳಿಸಲು ಹರ್ಷಿಸುತ್ತೇವೆ. 1997-1998ರ ಸಾಲಿನಲ್ಲಿ ಎಲ್. ಕೆ. ಜಿ., ಯು. ಕೆ. ಜಿ ಹಾಗೂ ಒಂದನೆಯ ತರಗತಿಯಿಂದ ಪ್ರಾರಂಭಿಸಿ, 1998-1999ರ ಸಾಲಿನಲ್ಲಿ ಎರಡನೆಯ, ಮೂರನೆಯ, ನಾಲ್ಕನೆಯ, ಐದನೆಯ, ಆರನೆಯ ತರಗತಿಗಳನ್ನು ಪ್ರಾರಂಭಿಸಿ ಈ ಪ್ರಶಸ್ತ ಸಾಲಿನಲ್ಲಿ 6ನೇ ತರಗತಿಯನ್ನು ತೆರೆದಿದ್ದೇವೆ. ಈ ತಿಂಗಳ ಮೊದಲ ವಾರದಿಂದ ಶಾಲಾ ತರಗತಿಗಳ ಪ್ರವೇಶವನ್ನು ಪ್ರಾರಂಭಿಸಿದ್ದೇವೆ. ಈ ಶಾಲೆಯಲ್ಲಿ 300ಕ್ಕಿಂತಲೂ ಹೆಚ್ಚಿನ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಲಿದ್ದಾರೆ.

1-6-98ರಲ್ಲಿ ಶಾಲೆಯನ್ನು ಸಂಸ್ಥೆವತಿಯಿಂದ ಆರಂಭಿಸುತ್ತಿದ್ದೇವೆ. ವಸತಿ ಶಾಲೆಯನ್ನು ತೆರೆದಿದ್ದು, ಈಜುಗಾರಿಕೆ, ಕರಾಟೆ, ಭರತನಾಟ್ಯ, ಯೋಗಾಸನ, ಟೈಲರಿಂಗ್, ಟೈಪಿಂಗ್ ತರಗತಿಗಳನ್ನು ಆರಂಭಿಸಿದ್ದೇವೆ. ನಮ್ಮ ಶಾಲೆಯಲ್ಲಿ ಒಳ್ಳೆಯ ತರಬೇತಿ ಹೊಂದಿರುವ ಶಿಕ್ಷಕಿಯರುಗಳು, ವಿಶಾಲವಾದ ಕೊಠಡಿಗಳು, ಸುಸಜ್ಜಿತ ಪಿಠೋಪಕರಣಗಳು, ವಿಶಾಲವಾದ ಆಟದ ಮೈದಾನವನ್ನು ಒಳಗೊಂಡ ಆಂಗ್ಲ ವಸತಿ ಶಾಲೆಯಾಗಿರುತ್ತದೆ. ವಸತಿ ನಿಲಯದ ವಾರ್ಷಿಕ ಶುಲ್ಕವು ರೂ. 7,500/- ಆಗಿರುತ್ತದೆ. ಆಸಕ್ತರು ಕೂಡಲೆ ಸಂಪರ್ಕಿಸಬೇಕಾಗಿ ವಿನಂತಿ. ಕೆಲವೇ ಸೀಟುಗಳು ಖಾಲಿ ಇರುತ್ತವೆ. ಜನಾಂಗದ ಸರ್ವರು ಇದರ ಸದುಪಯೋಗ ಪಡೆದುಕೊಳ್ಳಬೇಕಾಗಿ ಪ್ರಾರ್ಥನೆ.

**ಹೆಚ್ಚಿನ ವಿವರಗಳಿಗೆ :** ಮುಖ್ಯ ಶಿಕ್ಷಕಿಯನ್ನು/ಸಂಸ್ಥೆಯ ಕಾರ್ಯದರ್ಶಿಯನ್ನಾಗಲಿ ಭೇಟಿಯಾಗಲು ಈ ಮೂಲಕ ಕೋರಿದೆ.

ಅಧ್ಯಕ್ಷೆ : ಕಡ್ಯದ ಸುಶೀಲ ಗೋಪಾಲ

ಖಜಾಂಚಿ : ಶ್ರೀಮತಿ ನೀಲಾವತಿ ಪೊನ್ನಪ್ಪ

ಎ. ಎಸ್. ಪೊನ್ನಪ್ಪ
ಗೌರವ ಕಾರ್ಯದರ್ಶಿ

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ : **0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.